1:20 (ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ ದೈಹಿಕ ತಾಳ್ವಿಕೆ ಮತ್ತು ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆಗಳಿಗೆ ಸೂಚಿತ ದಿನಾಂಕದಂದು ಹಾಜರಾಗಲು ತಿಳಿಸಲಾಗುವುದು. ಸದರಿ ಸೂಚಿತ ದಿನಾಂಕದಂದು 1:20 ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು (ಎಸ್.ಎಸ್.ಎಲ್.ಸಿ ಅಂಕಪಟ್ಟಿ/ಶಾಲಾ ದಾಖಲಾತಿ ಪ್ರಮಾಣ ಪತ್ರಗಳು/ಶೈಕ್ಷಣಿಕ ಅರ್ಹತೆ/ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ/ಕನ್ನಡ ಮಾಧ್ಯಮ ಪ್ರಮಾಣ ಪತ್ರ/ಯೋಜನಾ ನಿರಾಶ್ರಿತ ಪ್ರಮಾಣ ಪತ್ರ/ಕುಷ್ಠರೋಗದಿಂದ ಗುಣಮುಖ ಹೊಂದಿದ ಪ್ರಮಾಣ ಪತ್ರ/ಮಾಜಿ ಸೈನಿಕ ಪ್ರಮಾಣ ಪತ್ರ) ಇವುಗಳನ್ನು ಮತ್ತು ಅವುಗಳ ಒಂದು ಜೆರಾಕ್ಸ್ ಪ್ರತಿಯೊಂದಿಗೆ ಪರಿಶೀಲನೆಗಾಗಿ **ಸಂಬಂಧಿಸಿದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರ ಎದುರು ಹಾಜರುಪಡಿಸಬೇಕು. ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆಯಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವೆಬ್‌ಸೈಟ್‌ಗೆ ಅಪ್‌ಲೋಡ್ ಮಾಡಿರುವ ಮಾಹಿತಿ/ಮೂಲ ದಾಖಲೆಗಳ ಪರಿಶೀಲನಾ ವೇಳೆ ಹಾಜರು ಪಡಿಸುವ ದಾಖಲೆಗಳಲ್ಲಿ ಯಾವುದೇ ರೀತಿಯ ಗೊಂದಲ/ ವ್ಯತಿರಿಕ್ತ ದಾಖಲೆ/ ಪ್ರಮಾಣ ಪತ್ರಗಳನ್ನು ಸಲ್ಲಿಸಿದ್ದಲ್ಲಿ ಅಂತಹ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಂಡು ಅರ್ಜಿಯಲ್ಲಿನ ಮಾಹಿತಿಯನ್ನು ಬದಲಾವಣೆ ಮಾಡಲಾಗುವುದಿಲ್ಲ. ಅರ್ಜಿ ಸಲ್ಲಿಸುವಾಗ ಅಭ್ಯರ್ಥಿಯು ಎಲ್ಲಾ ದಾಖಲೆಗಳನ್ನು ಪಡೆದಿಟ್ಟುಕೊಂಡು ಅರ್ಜಿಯನ್ನು ಸಲ್ಲಿಸತಕ್ಕದ್ದು, ಒಂದುವೇಳೆ ಅರ್ಜಿಯಲ್ಲಿ ನಮೂದಿಸಿರುವ ದಾಖಲೆಗಳನ್ನು ಸಲ್ಲಿಸಲು ವಿಫಲರಾದಲ್ಲಿ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಶೀಲನೆ ಸಮಯದಲ್ಲಿ ಹಾಜರುಪಡಿಸದ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ಅಭ್ಯರ್ಥಿಯು ಎಲ್ಲಾ ಸಂಧರ್ಭದಲ್ಲಿ ಒಂದೇ ತರಹದ ದಾಖಲೆಗಳನ್ನು ಸಲ್ಲಿಸತಕ್ಕದ್ದು, ಈ ಬಗ್ಗೆ ಅಭ್ಯರ್ಥಿ ಬಹಳ ಎಚ್ಚರಿಕೆ ವಹಿಸಲು ಸೂಚಿಸಿದೆ. ವಿಭಿನ್ನ ಮಾಹಿತಿಯನ್ನು ಸಲ್ಲಿಸಿದ್ದಲ್ಲಿ ಅಭ್ಯರ್ಥಿಯ ಅರ್ಜಿಯನ್ನು ತಿರಸ್ಕರಿಸಲಾಗುವುದು.**

ಮೂಲ ದಾಖಲೆಗಳ ಪರಿಶೀಲನೆಯಲ್ಲಿ ಅರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅನುಮತಿ ನೀಡಲಾಗುವುದು. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದವರು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹರಾಗುತ್ತಾರೆ.

ನೇಮಕಾತಿಗಾಗಿ ಇಲಾಖೆಯು ನಡೆಸುವ ಲಿಖಿತ Aptitude ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡಾವಾರು ಪ್ರಮಾಣದ ಅರ್ಧ ಭಾಗ ಹಾಗೂ ಅರಣ್ಯ ರಕ್ಷಕ ಹುದ್ದೆಗೆ ನಿಗಧಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಗಳುಪಡೆದ ಒಟ್ಟು ಅಂಕಗಳ ಶೇಕಡಾವಾರು ಪ್ರಮಾಣದ ಅರ್ಧ ಭಾಗವನ್ನು ಕ್ರೋಢೀಕರಿಸಿ ಎಲ್ಲಾ ಅಭ್ಯರ್ಥಿಗಳ ಮೆರಿಟ್ ಅನ್ನು ರಾಜ್ಯಮಟ್ಟದಲ್ಲಿ ನಿಗಧಿಪಡಿಸಲಾಗುವುದು. ಮೆರಿಟ್ ಆಧಾರದಲ್ಲಿ ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಅನ್ವಯ ಅಭ್ಯರ್ಥಿಗಳನ್ನು ನೇಮಕಾತಿಗಾಗಿ ಅರಣ್ಯ ರಕ್ಷಕ ಹುದ್ದೆಗೆ ಆಯ್ಕೆ ಮಾಡಲಾಗುವುದು.

**5.0 ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ, ದೈಹಿಕ ಕಾರ್ಯ ಸಮರ್ಥತೆ ಮತ್ತು ಲಿಖಿತ ಪರೀಕ್ಷೆಗಳು:**

ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ, ದೈಹಿಕ ಕಾರ್ಯಸಮರ್ಥತೆ ಪರೀಕ್ಷೆ ಮತ್ತು ಲಿಖಿತ ಪರೀಕ್ಷೆಗಳನ್ನು ಸಂಬಂಧಿಸಿದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರಿಂದ ಸಂಬಂಧಿಸಿದ ಪರೀಕ್ಷಾ ಕೇಂದ್ರಗಳಲ್ಲಿ ಸೂಚಿತ ದಿನಾಂಕಗಳಂದು ನಡೆಸಲಾಗುವುದು.

**6.0 ದೇಹದಾರ್ಢ್ಯತೆ ಪರೀಕ್ಷೆ**

**ಶಾರೀರಿಕ ಮಾನದಂಡಗಳು (Physical Standards):** ಶಾರೀರಿಕ ಮಾನದಂಡಗಳನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

| | | |
|---|---|---|
| **ಪುರುಷ ಅಭ್ಯರ್ಥಿಗಳಿಗೆ:** | | |
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ : 5 ಸೆ.ಮೀ. |
| ಮಹಿಳಾ ಅಭ್ಯರ್ಥಿಗಳಿಗೆ: | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಪರಿಗಣಿಸಲಾಗುವುದು.

**7.1 ದೈಹಿಕ ತಾಳ್ವಿಕೆ ಪರೀಕ್ಷೆ:–**

| | | |
|---|---|---|
| ಪುರುಷ ಅಭ್ಯರ್ಥಿಗಳಿಗೆ : | 1600 ಮೀಟರ್ ಓಟ | 06 ನಿಮಿಷಗಳ ಅವಧಿಯಲ್ಲಿ ಪೂರೈಸಬೇಕು. |
| ಮಹಿಳಾ ಅಭ್ಯರ್ಥಿಗಳಿಗೆ : | 1000 ಮೀಟರ್ ಓಟ | 05 ನಿಮಿಷಗಳ ಅವಧಿಯಲ್ಲಿ ಪೂರೈಸಬೇಕು. |

ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಮುಂದಿನ ಹಂತದ ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆಗೆ ಪರಿಗಣಿಸಲಾಗುವುದು. ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳಂತೆ ದೈಹಿಕ ತಾಳ್ವಿಕೆ ಪರೀಕ್ಷೆಗೆ ಮಾನದಂಡವನ್ನು ವಿಧಿಸಲಾಗಿರುತ್ತದೆ.

**ವಿಶೇಷ ಸೂಚನೆ:–**

ಈ ದೈಹಿಕ ತಾಳ್ವಿಕೆ ಪರೀಕ್ಷೆ ನಡೆಯುವ ಸಮಯದಲ್ಲಿ ಯಾವ ನಿಯಮ ಜಾರಿಯಲ್ಲಿರುತ್ತದೆಯೋ ಅದರಂತೆ ಮಾನದಂಡ ವಿಧಿಸಲಾಗುವುದು.

7.2 ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆ:

| ಕ್ರ. ಸಂ. | ಐಟಂ | ಅರ್ಹತಾ ಸಮಯ ಮತ್ತು ಕ್ರಮಿಸಬೇಕಾದ ದೂರ | |
|---|---|---|---|
| | | ಪುರುಷ ಅಭ್ಯರ್ಥಿಗಳಿಗೆ | ಮಹಿಳಾ ಅಭ್ಯರ್ಥಿಗಳಿಗೆ |
| 1 | 100 ಮೀಟರ್ ಓಟ | 15 ಸೆಕೆಂಡುಗಳು | 18.5 ಸೆಕೆಂಡುಗಳು |
| 2 | ಎತ್ತರ ಜಿಗಿತ | 1.20 ಮೀಟರ್ | 0.90 ಮೀಟರ್ |
| 3 | ಉದ್ದ ಜಿಗಿತ | 3.80 ಮೀಟರ್ | 2.50 ಮೀಟರ್ |
| 4 | ಶಾಟ್‌ಪುಟ್ | 5.60 ಮೀಟರ್ | 3.76 ಮೀಟರ್ |
| 5(ಎ | 800 ಮೀಟರ್ ಓಟ | 2 ನಿಮಿಷ 50 ಸೆಕೆಂಡುಗಳು | -- |
| 5(ಬಿ | 200 ಮೀಟರ್ ಓಟ | -- | 40 ಸೆಕೆಂಡುಗಳು |

ಈ ಮೇಲಿನ 5 ವಿವಿಧ ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆಗಳ ಪೈಕಿ ಕನಿಷ್ಠ 3 ಪರೀಕ್ಷೆಗಳಲ್ಲಿ ಕಡ್ಡಾಯವಾಗಿ ತೇರ್ಗಡೆ ಹೊಂದಬೇಕು.

ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹತೆ ಪಡೆಯುತ್ತಾರೆ. ದೈಹಿಕ ಕಾರ್ಯ ಸಮರ್ಥತೆಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ಯಾವುದೇ ಹಂತದಲ್ಲಿ ದೈಹಿಕ ತಾಳ್ವಿಕೆ/ದೈಹಿಕ ಕಾರ್ಯ ಸಮರ್ಥತೆ ಪರೀಕ್ಷೆಯಲ್ಲಿ ಅನರ್ಹರಾದಲ್ಲಿ ಅಥವಾ ಪರೀಕ್ಷೆ ನಡೆಯುವ ಸಮಯದಲ್ಲಿ ಗಾಯಗೊಂಡಲ್ಲಿ ಅಥವಾ ಇನ್ನಿತರ ಯಾವುದೇ ಕಾರಣಕ್ಕಾಗಿ ಅನರ್ಹರಾದ ಅಭ್ಯರ್ಥಿಗಳಿಗೆ ಇನ್ನೊಂದು ಅವಕಾಶ ನೀಡಲಾಗುವುದಿಲ್ಲ.

**7.3 ಲಿಖಿತ Aptitude ಪರೀಕ್ಷೆ**

ಅರಣ್ಯ ರಕ್ಷಕ ಹುದ್ದೆಗೆ ಲಿಖಿತ Aptitude ಪರೀಕ್ಷೆಯನ್ನು ಆಯಾ ಪರೀಕ್ಷಾ ಕೇಂದ್ರಗಳಲ್ಲಿ ನಡೆಸಲಾಗುವುದು. ಪ್ರಶ್ನೆ ಪತ್ರಿಕೆಯು ಸದರಿ ಹುದ್ದೆಗೆ ನಿಗಧಿಪಡಿಸಿದ ವಿದ್ಯಾರ್ಹತೆಯ ಮಟ್ಟದಲ್ಲಿದ್ದು **ಬಹು ಆಯ್ಕೆ** (objective multiple choice) ಮಾದರಿಯದ್ದಾಗಿರುತ್ತದೆ. ಲಿಖಿತ Aptitude ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ನೂರು (100) ಪ್ರಶ್ನೆಗಳನ್ನು ಒಳಗೊಂಡಿದ್ದು, ನೂರು (100) ಅಂಕಗಳದ್ದಾಗಿದ್ದು, 2 ಗಂಟೆ ಅವಧಿಯಲ್ಲಿ ಉತ್ತರಿಸಬೇಕಾಗಿದೆ.

**7.4 ಲಿಖಿತ ಪರೀಕ್ಷೆಯ ವಿಷಯಗಳು:**

| | |
|---|---|
| **ಗಣಿತ (**Mathematics)<br>**40 ಅಂಕಗಳಿಗೆ** | 2ನೇ ಪಿ.ಯು.ಸಿ./12ನೇ ತರಗತಿ ಮಟ್ಟದಲ್ಲಿ.<br>2nd PUC/12th Standard level**.** |
| **ಸಾಮಾನ್ಯ ಜ್ಞಾನ**<br>(General Knowledge),<br>**60 ಅಂಕಗಳಿಗೆ**<br>2ನೇ ಪಿ.ಯು.ಸಿ./<br>12ನೇ ತರಗತಿ ಮಟ್ಟದಲ್ಲಿ. 2nd PUC/12th Standard level**.** | **ಪಠ್ಯಕ್ರಮ:** ಭಾರತದ ಪ್ರಾಚೀನ ನಾಗರಿಕತೆಗಳು (Indian civilization), ಇತಿಹಾಸ (History), ಭಾರತದ ಸ್ವಾತಂತ್ರ್ಯ ಹೋರಾಟ (Indian Independence movement), ಭಾರತದ ಸಂವಿಧಾನ (Indian Constitution), ಭಾರತದ ರಾಜನೀತಿ (Indian Polity), ಭಾರತದ ಅರ್ಥನೀತಿ (Indian Economy), ಭೂಗೋಳ ಮತ್ತು ನೈಸರ್ಗಿಕ ಸಂಪನ್ಮೂಲಗಳು (Geography & Natural Resources), ವಿಜ್ಞಾನ ಮತ್ತು ತಂತ್ರಜ್ಞಾನ (Science & Technology), ಕಲೆ ಮತ್ತು ಸಂಸ್ಕೃತಿ (Art & Culture), ಮೂಲಭೂತ ಸೌಕರ್ಯಗಳ ಅಭಿವೃದ್ಧಿ (Infrastructural development), ಪ್ರಚಲಿತ ವಿದ್ಯಮಾನಗಳು (Current affairs), ಹಾಗೂ ಕ್ರೀಡೆ (Sports). |

**8.1.1 ಲಿಖಿತ** Aptitude **ಪರೀಕ್ಷಾ ಕೇಂದ್ರ:** ಲಿಖಿತ Aptitude ಪರೀಕ್ಷೆಗಳನ್ನು ಈ ಕೆಳಕಂಡ ಪರೀಕ್ಷಾ ಕೇಂದ್ರಗಳಲ್ಲಿ ನಡೆಸಲಾಗುವುದು. ಇಚ್ಛಿತ ಪರೀಕ್ಷಾ ಕೇಂದ್ರದ ವಿವರವನ್ನು ಅಭ್ಯರ್ಥಿಯು ಆನ್‌ಲೈನ್ ಅರ್ಜಿಯಲ್ಲಿ ನಮೂದಿಸುವುದು. ಈ ರೀತಿ ನಮೂದಿಸಿರುವ ಪರೀಕ್ಷಾ ಕೇಂದ್ರವನ್ನು ಯಾವುದೇ ಹಂತದಲ್ಲಿಯೂ ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ.

1) ಬೆಂಗಳೂರು, 2) ಚಾಮರಾಜನಗರ, 3) ಚಿಕ್ಕಮಗಳೂರು, 4) ಧಾರವಾಡ, 5) ಹಾಸನ, 6) ಶಿರಸಿ,

7) ಮಡಿಕೇರಿ, 8) ಮಂಗಳೂರು, 9) ಮೈಸೂರು, 10) ಶಿವಮೊಗ್ಗ, 11) ಬೆಳಗಾವಿ.

**ವಿಶೇಷ ಸೂಚನೆ :–** ಅಭ್ಯರ್ಥಿಗಳು ನೇಮಕಾತಿ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

**8.1.2 ಲಿಖಿತ Aptitude ಪರೀಕ್ಷೆ ಬರೆಯುವ ಭಾಷೆ :**

ಲಿಖಿತ Aptitude ಪರೀಕ್ಷೆ ಬರೆಯಲು ಅಭ್ಯರ್ಥಿಗಳು ಕನ್ನಡ ಅಥವಾ ಆಂಗ್ಲ ಭಾಷೆಯನ್ನು ಆಯ್ದುಕೊಳ್ಳಬಹುದಾಗಿದೆ. ಅಭ್ಯರ್ಥಿಯು ಆಯ್ದುಕೊಂಡ ಪರೀಕ್ಷೆ ಬರೆಯುವ ಭಾಷೆಯನ್ನು ಆನ್‌ಲೈನ್ ಅರ್ಜಿಯಲ್ಲಿ ನಮೂದಿಸಬೇಕು.

**8.1.3** ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಪಟ್ಟ ವಿದ್ಯಾಭ್ಯಾಸದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಸಿಸದೇ ಇರುವ ಅಭ್ಯರ್ಥಿಗಳಿಗೆ ಕರ್ನಾಟಕ ಸಿವಿಲ್ ಸೇವೆಗಳು (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1984ಕ್ಕೆ ಪೂರಕವಾಗಿ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 69 ಎಸ್‌ಸಿಆರ್ 84, ದಿನಾಂಕ 23–09–1985ರಲ್ಲಿ ಸೂಚಿಸಿದ ಪ್ರಕಾರ ಅಂತಹ ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಲು ನಿಗಧಿಪಡಿಸಿದ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರವೇ ಅಭ್ಯರ್ಥಿಗಳು ನೇಮಕಾತಿ ಹೊಂದಲು ಅರ್ಹರಾಗುತ್ತಾರೆ. ಕನ್ನಡ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.ಅದರಂತೆ ಕನ್ನಡ ಭಾಷಾ ಪರೀಕ್ಷೆಯನ್ನು ನಡೆಸಲಾಗುವುದು.

8.1.4 Medical Fitness:

ನಿಗಧಿಪಡಿಸಿದ ಹುದ್ದೆಗಳಿಗೆ ತಾತ್ಕಾಲಿಕವಾಗಿ ಆಯ್ಕೆಯಾದ ಅಭ್ಯರ್ಥಿಗಳ Medical Fitness ಪರೀಕ್ಷೆಯನ್ನುಜಿಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ Civil Surgeon/Chief Medical Officer/Medical Superintendent ರವರ ದರ್ಜೆಗಿಂತ ಕಡಿಮೆ ಇರದ ವೈದ್ಯಾಧಿಕಾರಿಗಳಿಂದ ಈ ಕೆಳಕಂಡ Medical Fitness ಪರೀಕ್ಷೆಗಳನ್ನು ಇಲಾಖಾ ಮುಖಾಂತರ ನಡೆಸಲಾಗುವುದು. ಇದಕ್ಕೆ ಹೊರತಾಗಿ ಯಾವುದೇ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದಿಲ್ಲ. ಹೀಗೆ ನಡೆಸುವ Medical Fitness ಪರೀಕ್ಷೆಯಲ್ಲಿ ಅನರ್ಹಗೊಂಡ ಅಭ್ಯರ್ಥಿಗಳನ್ನು ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು ಹಾಗೂ ಸೂಚಿತ ದಿನಾಂಕದಂದು ನಡೆಸುವ Medical Fitness ಪರೀಕ್ಷೆಗೆ ಗೈರುಹಾಜರಾಗುವ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ, ಯಾವುದೇ ಸಂದರ್ಭದಲ್ಲಿಯೂ ಇನ್ನೊಂದು ಅವಕಾಶವನ್ನು ನೀಡಲಾಗುವುದಿಲ್ಲ. Medical Fitness ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಿ ಸ್ಥಳ ಹಂಚಿಕೆ ನೀಡಲಾಗುವುದು. Medical Fitness ಪರೀಕ್ಷೆಗಳು ಈ ಕೆಳಕಂಡಂತಿರುತ್ತವೆ.

**8.1.5 ದೇಹದಾರ್ಢ್ಯತೆ ಪರೀಕ್ಷೆ (ಶಾರೀರಿಕ ಮಾನದಂಡಗಳು) (Physical Standards):**

ಈ ಕೆಳಗಿನಂತೆ ದೇಹದಾರ್ಢ್ಯತೆ (ಶಾರೀರಿಕ ಮಾನದಂಡಗಳ) ಕುರಿತು ಪರೀಕ್ಷೆಯನ್ನು ನಡೆಸಲಾಗುವುದು.

| **ಪುರುಷ ಅಭ್ಯರ್ಥಿಗಳಿಗೆ** | | |
|---|---|---|
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |
| ಮಹಿಳಾ ಅಭ್ಯರ್ಥಿಗಳಿಗೆ | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

**8.1.6 ಕೆಳಕಂಡ ಅಂಗವಿಕಲತೆ (Physical disqualifactions) ಇರುವವರು ಆಯ್ಕೆಗೆ ಅನರ್ಹರು:**

1. ತಾಗು ಮಂಡಿಗಳು (knock knees)
2. ಬಾಗಿದ ಕಾಲುಗಳು (Bow legs)
3. ಚಪ್ಪಟೆ ಪಾದ (Flat feet)
4. ನರ ಊತವಿರುವವರು (Varicose Veins)
5. Impediment in speech and hearing.
6. Hydrocele in men
7. Vision / colour blindness / night blindness

**8.1.7 ದೃಷ್ಟಿ ಸಾಮರ್ಥ್ಯ:**

ಅಭ್ಯರ್ಥಿಗಳು ಈ ಕೆಳಗೆ ನಿಗಧಿಪಡಿಸಿರುವ ದೃಷ್ಟಿ ಸಾಮರ್ಥ್ಯವನ್ನು ಕನ್ನಡಕ ಸಹಿತ ಅಥವಾ ಕನ್ನಡಕ ರಹಿತ ಕಡ್ಡಾಯವಾಗಿ ಹೊಂದಿರಬೇಕು ಹಾಗೂ ದೃಷ್ಟಿ ಸಾಮರ್ಥ್ಯ ಕುರಿತು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

| ದೂರ ದೃಷ್ಟಿ (Distant vision) | | | ಸಮೀಪ ದೃಷ್ಟಿ (Near vision) | | |
|---|---|---|---|---|---|
| ದೋಷರಹಿತ ಕಣ್ಣು (Better eye) | | ದೋಷಪೂರಿತ ಕಣ್ಣು (Worse eye) | ದೋಷರಹಿತ ಕಣ್ಣು (Better eye) | | ದೋಷಪೂರಿತ ಕಣ್ಣು (Worse eye) |
| 6/6 ಮೀಟರ್ | ಅಥವಾ | 6/9 ಮೀಟರ್ | 0/6 ಮೀಟರ್ | ಅಥವಾ | 0/8 ಮೀಟರ್ |

ಪ್ರತಿ ಕಣ್ಣು ಸಂಪೂರ್ಣ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳೆಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

**8.1.8 ಶ್ರವಣಶಕ್ತಿ**

ಅಭ್ಯರ್ಥಿಗಳ ಶ್ರವಣ ಶಕ್ತಿಯನ್ನು ಪರೀಕ್ಷಿಸಲು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

1. ರಿನ್ನರ್ಸ್ ಟೆಸ್ಟ್
2. ವೆಬ್ಬರ್ಸ್ ಟೆಸ್ಟ್
3. ಟೆಸ್ಟ್ ಫಾರ್ ವರ್ಟಿಗೋ

ಮೇಲಿನ ಪರೀಕ್ಷೆಗಳಲ್ಲಿ ಯಾವುದಾದರೂ ಶ್ರವಣ ದೋಷವಿದೆಯೆಂದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಗೆ ಅನರ್ಹರಾಗುತ್ತಾರೆ.

**9. ನೇಮಕಾತಿ ಹೊಂದಿದ ಅಭ್ಯರ್ಥಿಗಳ ತರಬೇತಿ, ಪರೀಕ್ಷಾರ್ಥ ಅವಧಿ ಹಾಗೂ ಸ್ಥಳ ನಿಯುಕ್ತಿ:**

ಅಂತಿಮವಾಗಿ ನೇಮಕಾತಿಗೆ ಅರ್ಹರಾದ ಅಭ್ಯರ್ಥಿಗಳನ್ನು ಅಧಿಸೂಚಿಸಿರುವ ವಿಭಾಗಕ್ಕೆ ನಿಯುಕ್ತಿಗೊಳಿಸಲಾಗುವುದು. ನೇಮಕಾತಿ ಹೊಂದಿದ ಅಭ್ಯರ್ಥಿಯು ಪ್ರಪ್ರಥಮವಾಗಿ ನೇಮಕ ಮಾಡಿದ ಸ್ಥಳದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಆಯಾ ಹುದ್ದೆಗೆ ನಿಗಧಿಪಡಿಸಿದ ತರಬೇತಿಯನ್ನು ಯಶಸ್ವಿಯಾಗಿ ಪೂರೈಸಬೇಕಾಗಿದೆ. ನಿಗದಿಪಡಿಸಿದ ತರಬೇತಿ ಅವಧಿ ಹಾಗೂ ಪರೀಕ್ಷಾರ್ಥ ಅವಧಿಯ ವಿವರ ಕೆಳಕಂಡಂತಿದೆ.

| ಹುದ್ದೆ | ತರಬೇತಿ ಅವಧಿ | ಪರೀಕ್ಷಾರ್ಥ ಅವಧಿ(ತರಬೇತಿ ಅವಧಿ ಸೇರಿ) |
|---|---|---|
| ಅರಣ್ಯ ರಕ್ಷಕ | 9 ತಿಂಗಳು | 24 ತಿಂಗಳು |

**10. ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಲ್ಲಿಸಬೇಕಾದ ದಾಖಲೆ/ಪ್ರಮಾಣ ಪತ್ರಗಳ ವಿವರ ಕೆಳಕಂಡಂತಿದೆ:–**

ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರ ಹಾಗೂ ಆದಾಯ ಪ್ರಮಾಣ ಪತ್ರ, ಇತ್ಯಾದಿ ಮೀಸಲಾತಿ ಕುರಿತು ಪ್ರಮಾಣ ಪತ್ರಗಳನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು. ಹಾಗೂ ಈ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರುವ ಪ್ರಮಾಣ ಪತ್ರಗಳು ಆಗಿರಬೇಕು.

10.0 ಶೈಕ್ಷಣಿಕ ವಿದ್ಯಾರ್ಹತೆಗೆ ಸಂಬಂಧಿಸಿದ ಅಂಕ ಪಟ್ಟಿ

10.1 ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಡಿ" ರಲ್ಲಿ ಪಡೆದಿರಬೇಕು.

10.2 ಪ್ರವರ್ಗ– I ಕ್ಕೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಇ" ರಲ್ಲಿ ಪಡೆದಿರಬೇಕು.

**10.3** ಪ್ರವರ್ಗ– IIಎ, IIಬಿ, IIIಎ ಮತ್ತು IIIಬಿ. ಗೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ನೀಡಲಾದ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಎಫ್" ರಲ್ಲಿ ಪಡೆದಿರಬೇಕು.

**ವಿಶೇಷ ಸೂಚನೆ:–**"ನಮೂನೆ–ಎಫ್" ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಐದು (5) ವರ್ಷಗಳಿಗಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**10.4** ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಯು ಸಂಬಂಧಪಟ್ಟ ತಹಶೀಲ್ದಾರ್‌ರಿಂದ "ನಮೂನೆ–3" ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಪಡೆದಿರಬೇಕು.

**10.5** ಮಾಜಿ ಸೈನಿಕ ಅಭ್ಯರ್ಥಿಗಳು ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಹೊಂದಿದ ಬಗ್ಗೆ ಮೂಲ ಪ್ರಮಾಣ ಪತ್ರ ಮತ್ತು ಪೆನ್‌ಷನ್ ಪಡೆಯುತ್ತಿರುವ ಬಗ್ಗೆ ದಾಖಲೆ ಪತ್ರ ಪಡೆದಿರಬೇಕು ಹಾಗೂ ಮಾಜಿ ಸೈನಿಕ ಮೀಸಲಾತಿಗೆ ನಿಯಮಾನುಸಾರ ಅರ್ಹರೇ ಎಂಬ ಬಗ್ಗೆ ಪ್ರಮಾಣ ಪತ್ರವನ್ನು ಹತ್ತಿರದ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆಯಿಂದ ಪಡೆದಿರಬೇಕು.

**10.6** (ಅ) ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ. ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರಿಗೆ (ಎಲ್ಲಾ ವರ್ಷಗಳು) ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರಿಂದ ನೀಡಲಾದ "ನಮೂನೆ–2"ನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮೇಲುರುಜು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು.

(ಆ) ಗ್ರಾಮೀಣ ಮೀಸಲಾತಿ ಕೋರಿರುವ ಸಾಮಾನ್ಯ ಅರ್ಹತೆಯ (General Merit) ಅಭ್ಯರ್ಥಿಗಳು ಮೇಲೆ 10.6(ಅ) ರಲ್ಲಿ ತಿಳಿಸಿರುವ "ನಮೂನೆ–2" ರ ಜೊತೆಗೆ ನಿಗಧಿತ "ನಮೂನೆ–1" ರಲ್ಲಿ ಸಂಬಂಧಪಟ್ಟ ತಹಶೀಲ್ದಾರರಿಂದ ಅವರು ಮೇಲುಸ್ಥರ (Creamy Layer) ಪರಿಮಿತಿಯಲ್ಲಿ ಬರುವುದಿಲ್ಲವೆಂದು ದೃಢೀಕರಿಸಿರುವ ಪ್ರಮಾಣ ಪತ್ರ ಪಡೆದಿರಬೇಕು.

**ವಿಶೇಷ ಸೂಚನೆ:–**ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ. ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**10.7** ಕನ್ನಡ ಮಾಧ್ಯಮ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿದ ಪ್ರಮಾಣ ಪತ್ರ ಪಡೆದಿರಬೇಕು.

**10.8** ಅರಣ್ಯ ಪ್ರೇರಕರಾಗಿ ಅಧಿಸೂಚನೆ ದಿನಾಂಕಕ್ಕೆ ಐದು (5) ವರ್ಷಗಳ ಸೇವೆಯನ್ನು ಸಲ್ಲಿಸಿದ್ದು, ಪ್ರಸ್ತುತ ಅರಣ್ಯ ಪ್ರೇರಕರಾಗಿ ಮುಂದುವರೆಯುತ್ತಿರುವ ಅರಣ್ಯ ಪ್ರೇರಕರ ಬಗ್ಗೆ ಸಂಬಂಧಿಸಿದ ಸಾಮಾಜಿಕ ಅರಣ್ಯ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**10.9** ದಿನಗೂಲಿ ನೌಕರರು ದಿನಾಂಕ 01–07–1984 ರಿಂದ 29–01–1990ರ ಒಳಗೆ ದಿನಗೂಲಿ ನೌಕರರಾಗಿ ಅರಣ್ಯ ಇಲಾಖೆಯಲ್ಲಿ ಸೇವೆಗೆ ಸೇರಿದ್ದು, ಮಸ್ಟರ್ ರೋಲ್ ಅಡಿಯಲ್ಲಿ ದಿನಗೂಲಿ ನೌಕರರಾಗಿ ಈಗಲೂ ಸೇವೆಯಲ್ಲಿ ಮುಂದುವರೆಯುತ್ತಿರುವ ಕುರಿತು ಸಂಬಂಧಿಸಿದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**10.10** ಕುಷ್ಠರೋಗದಿಂದ ಗುಣಮುಖ ಹೊಂದಿರುವ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳಿಗೆ ಮೀಸಲಾತಿ ಕೋರುವ ಅಭ್ಯರ್ಥಿಗಳು **ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ** ವೈದ್ಯಕೀಯ ಪ್ರಮಾಣ ಪತ್ರವನ್ನು ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೇನೆನಿ 2005, ದಿನಾಂಕ 19–11–2005 ರಲ್ಲಿ ನಿಗಧಿಪಡಿಸಿದ ನಮೂನೆಯಲ್ಲಿ ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಕುಷ್ಠರೋಗದಿಂದ ಗುಣಮುಖ ಹೊಂದಿರುವ ಅಭ್ಯರ್ಥಿಗಳಿಗೆ ಯಾವುದೇ ವಿಧವಾದ ಅಂಗವಿಕಲತೆಯನ್ನು ಹೊಂದಿರಬಾರದು.

**11.0 ಗಮನಿಸಬೇಕಾದ ಮುಖ್ಯ ಅಂಶಗಳು**

11.1 ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ.

11.2 ಅಭ್ಯರ್ಥಿಗಳು ಅರ್ಜಿ ಹಾಕುವ ಮೊದಲು ದೇಹದಾರ್ಡ್ಯತೆಯ ಕುರಿತು ಸದರಿ ಹುದ್ದೆಗೆ ನಿಗಧಿಪಡಿಸಿರುವ ಮಾನದಂಡವು ತಮಗೆ ಇರುವ ಕುರಿತು ಖಚಿತಪಡಿಸಿಕೊಂಡು ಅರ್ಜಿಯನ್ನು ಸಲ್ಲಿಸಲು ತಿಳಿಸಿದೆ.

11.3 ಯಾವುದೇ ವಿಧದ ಅಂಗವಿಕಲತೆಯನ್ನು ಹೊಂದಿರುವ ಅಭ್ಯರ್ಥಿಗಳುಅರಣ್ಯ ರಕ್ಷಕ ಹುದ್ದೆಗೆ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ. ಕುಷ್ಠರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿಗಳು ಯಾವುದೇ ವಿಧದ ಅಂಗವಿಕಲತೆಯನ್ನು ಹೊಂದಿರಬಾರದು.

11.4 ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ On-line ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ಮತ್ತು ಶುಲ್ಕ ಪಾವತಿಸಿದ ರಶೀದಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

11.5 ಅಭ್ಯರ್ಥಿಗಳು On-line ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳ ಆಧಾರದ ಮೇಲೆ ಅವರ ಅರ್ಹತೆಯನ್ನು ಪರಿಗಣಿಸಿ 1:20 (ಖಾಲಿ ಹುದ್ದೆ:ಅಭ್ಯರ್ಥಿ) ಅನುಪಾತದ ಪಟ್ಟಿಯನ್ನು ಸಿದ್ಧಪಡಿಸುವುದರಿಂದ ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಗಳೇ ಅದಕ್ಕೆ ನೇರ ಮತ್ತು ಸಂಪೂರ್ಣ ಜವಾಬ್ದಾರರಾಗುತ್ತಾರೆ. ಅಭ್ಯರ್ಥಿಗಳು On-line ಅರ್ಜಿಯಲ್ಲಿ ನೀಡಿರುವ ಮಾಹಿತಿ/ವಿವರಗಳನ್ನು ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ. ಆದ ಪ್ರಯುಕ್ತ ಅಭ್ಯರ್ಥಿಗಳು On-line ಅರ್ಜಿಯನ್ನು ಭರ್ತಿ ಮಾಡುವಾಗ ಈ ಕಛೇರಿಯ ಅಧಿಸೂಚನೆಯಲ್ಲಿ ತಿಳಿಸಿರುವ ಎಲ್ಲಾ ಅಂಶಗಳನ್ನು ಸರಿಯಾಗಿ ಅರ್ಥೈಸಿಕೊಂಡು, ಅರ್ಜಿಯನ್ನು ಸರಿಯಾಗಿ ಮತ್ತು ಸಮರ್ಪಕವಾಗಿ ಭರ್ತಿ ಮಾಡತಕ್ಕದ್ದು.

11.6 ಪ್ರವರ್ಗದ ಮೀಸಲಾತಿಯಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅರ್ಜಿಯಲ್ಲಿ ಪ್ರವರ್ಗದ ಕಾಲಂ ಅನ್ನು ಕಡ್ಡಾಯವಾಗಿ ನಮೂದಿಸಬೇಕು. ಈ ಕಾಲಂ ಅನ್ನು ಭರ್ತಿ ಮಾಡದೆ ಖಾಲಿ ಬಿಟ್ಟಲ್ಲಿ "ಸಾಮಾನ್ಯ ಅರ್ಹತೆ" ಎಂದು ಪರಿಗಣಿಸಲಾಗುವುದು. ಯಾವುದೇ ಹಂತದಲ್ಲಿ ಅಭ್ಯರ್ಥಿಯು ತಾನು ಹೊಂದಿರುವ ಪ್ರವರ್ಗದ ಕುರಿತು ಮಾಹಿತಿಯನ್ನು ಹೊಸದಾಗಿ ಸೇರ್ಪಡೆ ಮಾಡಲು ಅಥವಾ ಬದಲಾವಣೆ ಮಾಡಲು ಅವಕಾಶವಿಲ್ಲ.

11.7 ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡಿರುವ ಮಾಹಿತಿಗಳು ಸರಿ ಇದೆ ಎಂದು ಭಾವಿಸಿ ಅವರುಗಳು ಮೂಲ ದಾಖಲೆಗಳ ಪರಿಶೀಲನೆ ಮತ್ತು ದೇಹದಾರ್ಡ್ಯತೆ, ದೈಹಿಕ ತಾಳ್ವಿಕೆ, ದೈಹಿಕ ಕಾರ್ಯ ಸಮರ್ಥತೆ ಮತ್ತು ಲಿಖಿತ Aptitude ಪರೀಕ್ಷೆಯನ್ನು ಬರೆಯಲು ಅರ್ಹರೇ ಎಂಬುದನ್ನು ಪರಿಗಣಿಸಿ ಅರ್ಹರೆಂದು ಕಂಡು ಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡಲಾಗುತ್ತದೆ. ಆದ್ದರಿಂದ ನಿಗಧಿಪಡಿಸಿದ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ.

11.8 ಅರ್ಜಿ ಶುಲ್ಕವನ್ನು ಯಾವುದೇ ಕಾರಣಕ್ಕೂ ಮರುಪಾವತಿ ಮಾಡಲಾಗುವುದಿಲ್ಲ.

11.9 ಒಬ್ಬನೇ ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ತಾನು ಸಲ್ಲಿಸಿರುವ ಎಲ್ಲಾ ಅರ್ಜಿಗಳಲ್ಲಿಯೂ ಒಂದೇ ರೀತಿ ಮಾಹಿತಿಯನ್ನು ನೀಡಿದಲ್ಲಿ ಅಭ್ಯರ್ಥಿ ಸಲ್ಲಿಸಿರುವ ಕೊನೆಯ ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು. ಈ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ.

11.10 ಪ್ರಸ್ತುತ ಸರ್ಕಾರಿ (ಕೇಂದ್ರ ಸರ್ಕಾರ/ಕರ್ನಾಟಕ ರಾಜ್ಯ ಸರ್ಕಾರ/ಇತರೆ ರಾಜ್ಯಗಳು) ಹಾಗೂ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಕಡ್ಡಾಯವಾಗಿ ಅನುಮತಿ ಪತ್ರವನ್ನು ಪಡೆದಿಟ್ಟುಕೊಂಡು ಅರಣ್ಯ ಇಲಾಖೆಯು ಆಪೇಕ್ಷಿಸಿದಾಗ ನೀಡತಕ್ಕದ್ದು.

11.11 ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಲಾಗುವುದು.

11.12 ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

11.13 ಕಾನೂನು ಬಾಹಿರವೆಂದು ಘೋಷಿಸಲಾದ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

11.14 ಅಭ್ಯರ್ಥಿಯು ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

11.15 ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿಯರನ್ನು / ಪತಿಯರನ್ನು ಹೊಂದಿದ ಪುರುಷ / ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೇ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

11.16 ಯಾವುದೇ ಅಭ್ಯರ್ಥಿಯು ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರ / ಸರ್ಕಾರಿ ಸಂಸ್ಥೆಗಳಿಗೆ ನಡೆಸುವ ಯಾವುದೇ ಪರೀಕ್ಷೆಗಳಿಗೆ ಅಥವಾ ಆಯ್ಕೆಗಳಿಗೆ ಹಾಜರಾಗಲು ತಾತ್ಕಾಲಿಕವಾಗಿ ಬಹಿಷ್ಕರಿಸಲ್ಪಟ್ಟಿದ್ದರೆ ಅಥವಾ ಖಾಯಂ ಆಗಿ ಅನರ್ಹಗೊಂಡಿದ್ದರೆ ಅಥವಾ ಬಹಿಷ್ಕರಿಸಲ್ಪಟ್ಟಿದ್ದರೆ, ಅಂತಹ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

11.17 ಅಭ್ಯರ್ಥಿಯು ನೇಮಕಾತಿ ಪರೀಕ್ಷೆಗೆ ಬೇರೊಬ್ಬ ವ್ಯಕ್ತಿಯನ್ನು ತನ್ನ ಪರವಾಗಿ ಕಳುಹಿಸಿದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಈ ನೇಮಕಾತಿಗೆ ಅವರನ್ನು ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

11.18 ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–ಎಸ್‌ಪಿಎಲ್–04–ಪಿಇಟಿ–2005, ದಿನಾಂಕ 31–3–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory Pension Scheme) ಗೆ ಈ ನೇಮಕಾತಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

11.19 ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟು ತೀರ್ಪುಗಳು, ಸರಕಾರದ ನಿರ್ದೇಶನಗಳು, ಇಲಾಖೆ ಸುತ್ತೋಲೆಗಳು ಬಂದಲ್ಲಿ, ಪ್ರಕಟಿಸಿರುವ ಆಯ್ಕೆ ಪಟ್ಟಿಯಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಹೊಂದಿರುತ್ತದೆ.

11.20 ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಮತ್ತು ಮೀಸಲಾತಿ ವರ್ಗೀಕರಣದಲ್ಲಿ ಏನಾದರೂ ಬದಲಾವಣೆ ಮಾಡಬೇಕಾದ ಅವಶ್ಯಕತೆ ಕಂಡು ಬಂದಲ್ಲಿ ಬದಲಾವಣೆ ಮಾಡಲಾಗುವುದು ಮತ್ತು ಬದಲಾದ ವಿವರಗಳನ್ನು ಇಲಾಖಾ ವೆಬ್‌ಸೈಟ್: www.aranya.gov.in ನಲ್ಲಿ ಪ್ರಕಟಿಸಲಾಗುವುದು.

11.21 ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ಅಧಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾನೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

11.22 ಉತ್ತರ ಪತ್ರಿಕೆಯನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸುವುದರಿಂದ ಲಿಖಿತ (Aptitude) ಪರೀಕ್ಷೆಗೆ ಅರ್ಹತೆ ಪಡೆದಿರುವ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಮಾಹಿತಿಯನ್ನು ಭರ್ತಿ ಮಾಡುವ ಸಲುವಾಗಿ ಪರೀಕ್ಷೆಗೆ ನಿಗಧಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು. ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗಸೂಚನೆಗಳನ್ನು ನೀಡುತ್ತಾರೆ.

11.23 ನೇರ ನೇಮಕಾತಿ ಪ್ರಕ್ರಿಯೆಯ ಯಾವುದೇ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ.

11.24 ಅಭ್ಯರ್ಥಿಯ ಆಯ್ಕೆ ಪ್ರಕ್ರಿಯೆಗೆ ಸಂಬಂಧಿಸಿದಂತೆ ಯಾವುದೇ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ. ಎಲ್ಲಾ ಕಾನೂನು ವಿವಾದಗಳು ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

ಬೆಂಗಳೂರು

ದಿನಾಂಕ: 23–03–2016

**P.R. 78** — **ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ**

**SC-100** — **(ಮುಖ್ಯಸ್ಥರು, ಅರಣ್ಯ ಪಡೆ) ಮತ್ತು ಆಯ್ಕೆ ಪ್ರಾಧಿಕಾರ.**

## ಅರಣ್ಯ ಇಲಾಖೆ

## ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ) ಹಾಗೂ ಆಯ್ಕೆ ಪ್ರಾಧಿಕಾರ ಇವರ ಕಛೇರಿ, ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು–560003.

### ಅಧಿಸೂಚನೆ

**ಅಧಿಸೂಚನೆ ಸಂಖ್ಯೆ: ಬಿ9–ವಅಅ–ವಿವ–5/2015–16, ದಿನಾಂಕ 22–03–2016.**

**ವಲಯ ಅರಣ್ಯಾಧಿಕಾರಿ ಹುದ್ದೆಗಳಿಗೆ ನೇರ ನೇಮಕಾತಿ**

ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ)(ತಿದ್ದುಪಡಿ) ನಿಯಮಗಳು, 2012 ಮತ್ತು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮ, 2013ರ ನಿಯಮಗಳಂತೆ ಅರಣ್ಯ ಇಲಾಖೆಯಲ್ಲಿ ಒಟ್ಟು 60 ವಲಯ ಅರಣ್ಯಾಧಿಕಾರಿ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಆಯ್ಕೆ ಮಾಡಲು ಅರ್ಹರಾದ ಬಿ.ಎಸ್‌ಸಿ. (ಅರಣ್ಯ

ಶಾಸ್ತ್ರ)/ವಿಜ್ಞಾನ/ಇಂಜಿನಿಯರಿಂಗ್ ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ ಹಾಗೂ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ 12 ಬ್ಯಾಕ್‌ಲಾಗ್ ವಲಯ ಅರಣ್ಯಾಧಿಕಾರಿ ಹುದ್ದೆಗಳು, ಒಟ್ಟು 72 ಹುದ್ದೆಗಳು.

**1. ಅರ್ಜಿ ಸಲ್ಲಿಸುವ ವಿಧಾನ:**

On-line, ಅರ್ಜಿ ಅಧಿಸೂಚನೆ ಮತ್ತು ಪಠ್ಯಕ್ರಮ (Syllabus) ಇವುಗಳನ್ನು ಇಲಾಖಾ ವೆಬ್‌ಸೈಟ್: www.aranya.gov.in ನಲ್ಲಿ ಪ್ರಕಟಪಡಿಸಲಾಗುವುದು.ಅರ್ಜಿಯನ್ನು On-line ಮುಖಾಂತರ ಅಭ್ಯರ್ಥಿಗಳು ಸಲ್ಲಿಸತಕ್ಕದ್ದು.ಇದನ್ನು ಹೊರತುಪಡಿಸಿ ಯಾವುದೇ ವಿಧದಲ್ಲಿ ಅರ್ಜಿಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. On-line ಅರ್ಜಿಯನ್ನು ತುಂಬಲು ಸಹಾಯಕವಾಗುವ ಸೂಚನೆಗಳನ್ನು ಇಲಾಖಾ ವೆಬ್‌ಸೈಟ್‌ನಲ್ಲಿ ನೀಡಲಾಗುವುದು.ಒಬ್ಬ ಅಭ್ಯರ್ಥಿ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಬಾರದು.ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿದ ಆನ್‌ಲೈನ್ ಅರ್ಜಿಯ ಒಂದು ಪ್ರತಿಯನ್ನು ತೆಗೆದು ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು. On-line ಅರ್ಜಿಯ ಪ್ರತಿಯನ್ನು ಅಂಚೆ ಮುಖಾಂತರ ಅಥವಾ ಮುದ್ದಾಂ ಆಗಿ ಇಲಾಖೆಗೆ ಸಲ್ಲಿಸಬೇಕಾದ ಅವಶ್ಯಕತೆ ಇರುವುದಿಲ್ಲ.

1.1 ಜನ್ಮ ದಿನಾಂಕ ದೃಢೀಕರಿಸುವ ಪ್ರಮಾಣ ಪತ್ರ, ಶೈಕ್ಷಣಿಕ ಪ್ರಮಾಣ ಪತ್ರಗಳು, ಜಾತಿ/ಪ್ರವರ್ಗ ದೃಢೀಕರಿಸುವ ಪ್ರಮಾಣ ಪತ್ರಗಳು, ಸೈನಿಕ ಸೇವೆ ದೃಢೀಕರಣ ಪ್ರಮಾಣ ಪತ್ರ, ಹೈದರಾಬಾದ್–ಕರ್ನಾಟಕ ಮೀಸಲಾತಿ ಕೋರುವ ಪ್ರಮಾಣ ಪತ್ರ (ಅರ್ಜಿಯಲ್ಲಿ ಕೋರಲಾದ ಮೀಸಲಾತಿಗೆ ಸಂಬಂಧಿಸಿದ ಪ್ರಮಾಣ ಪತ್ರಗಳು) ಗಳನ್ನು ಸ್ಕ್ಯಾನ್ ಮಾಡಿ ಇಲಾಖಾ ವೆಬ್ ಸೈಟ್‌ಗೆ ಅರ್ಜಿ ಸಲ್ಲಿಸುವ ವೇಳೆಯಲ್ಲಿ ಅಪ್‌ಲೋಡ್ ಮಾಡತಕ್ಕದ್ದು, ಈ ಕುರಿತು ಪೂರ್ಣಮಾಹಿತಿಯನ್ನು ಅರ್ಜಿ ಸಲ್ಲಿಸುವ ವೇಳೆಯಲ್ಲಿ ವೆಬ್‌ಸೈಟ್‌ನಲ್ಲಿ ತಿಳಿಸಲಾಗುವುದು. ಅಭ್ಯರ್ಥಿಯು ಯಾವ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ವೇಳೆ ಅಪ್‌ಲೋಡ್ ಮಾಡಿರುತ್ತಾರೆಯೋ ಅದೇ ಪ್ರಮಾಣ ಪತ್ರವನ್ನು ಎಲ್ಲಾ ಹಂತದಲ್ಲೂ ಪರಿಗಣನೆಗೆ ತೆಗೆದುಕೊಳ್ಳಲಾಗುವುದು.ಇದನ್ನು ಯಾವ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ.

1.2 On-line ಮುಖಾಂತರ ಅರ್ಜಿಯನ್ನು ದಿನಾಂಕ 18–04–2016ರಿಂದ 17–05–2016 ರಂದು ಅಪರಾಹ್ನ 4.30 ಗಂಟೆಯವರೆಗೆ ಸಲ್ಲಿಸಬಹುದಾಗಿರುತ್ತದೆ.

1.3 ಮೂಲ ದಾಖಲೆಗಳ ಪರಿಶೀಲನೆ, ಪೂರ್ವಭಾವಿ ಪರೀಕ್ಷೆ ದಿನಾಂಕ, ಪರೀಕ್ಷೆ ನಡೆಯುವ ಸ್ಥಳ ಮತ್ತು ವೇಳೆಯನ್ನು ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.ಮೂಲ ದಾಖಲೆಗಳ ಪರೀಕ್ಷೆ ನಡೆಯುವ ದಿನಾಂಕ, ವೇಳಾಪಟ್ಟಿ, ಪರೀಕ್ಷಾ ಕೇಂದ್ರ ವಿವರಗಳುಳ್ಳ ಪ್ರವೇಶ ಪತ್ರವನ್ನು ಅರ್ಹ ಅಭ್ಯರ್ಥಿಗಳು ಇಲಾಖಾ ವೆಬ್‌ಸೈಟ್ www.aranya.gov.in ನಿಂದ ಡೌನ್‌ಲೋಡ್ ಮಾಡಿಕೊಳ್ಳುವುದು.ಪ್ರವೇಶ ಪತ್ರವನ್ನು ಅಂಚೆ ಮುಖಾಂತರ ಕಳುಹಿಸಲಾಗುವುದಿಲ್ಲ.

**2 ಅರ್ಜಿ ಶುಲ್ಕ:** ಸಾಮಾನ್ಯ ವರ್ಗ, IIA, IIB, IIIA, IIIB ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ರೂ.100–00+ಸೇವಾ ಶುಲ್ಕ ₹. 12–00;ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ₹. 50–00 + ಸೇವಾ ಶುಲ್ಕ ₹. 12–00. On-line ನಲ್ಲಿ ಅರ್ಜಿ ಸಲ್ಲಿಸಿದ ನಂತರ, ಮುದ್ರಿತ ಅರ್ಜಿ ಪ್ರತಿಯನ್ನು ತೆಗೆದುಕೊಂಡು, ಇ–ಪಾವತಿ ಸೌಲಭ್ಯವಿರುವ ಅಂಚೆ ಕಚೇರಿಯಲ್ಲಿ ಮುದ್ರಿತ ಅರ್ಜಿ ಪ್ರತಿಯನ್ನು ತೋರಿಸಿ, ಈ ಮೇಲೆ ಹೇಳಿರುವ ಅರ್ಜಿ ಶುಲ್ಕ ಮತ್ತು ಸೇವಾ ಶುಲ್ಕವನ್ನು ಅಭ್ಯರ್ಥಿಗಳು ಪಾವತಿಸತಕ್ಕದ್ದು. ಅರ್ಜಿ ಶುಲ್ಕ ಪಾವತಿಸಲು ಕೊನೆಯ ದಿನಾಂಕ : 21–05–2016 ಆಗಿರುತ್ತದೆ.

**ಸೂಚನೆ:–** On-line ನಲ್ಲಿ ಅರ್ಜಿಯನ್ನು ಸಲ್ಲಿಸದೇ ನೇರವಾಗಿ ಕೊರಿಯರ್, ನೊಂದಾಯಿತ ಅಂಚೆ, ಸಾಧಾರಣ ಅಂಚೆ, ಮುದ್ದಾಂ ಇತ್ಯಾದಿ ವಿಧಾನಗಳ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**3.1 ಹುದ್ದೆಗಳ ವರ್ಗೀಕರಣ:–**ವೇತನ ಶ್ರೇಣಿ: ₹. 21600–600–24600–700–28800–800–33600–900–39000–1050–40050.

ಈ ಕೆಳಕಂಡ ಹುದ್ದೆಗಳ ಸಂಖ್ಯೆಗಳು ತಾತ್ಕಾಲಿಕವಾಗಿದ್ದು, ನೇಮಕಾತಿ ಸಮಯದಲ್ಲಿ ಅವಶ್ಯಕತೆಗೆ ಅನುಗುಣವಾಗಿ ಮಾರ್ಪಡಿಸಬಹುದಾಗಿರುತ್ತದೆ.

**3.2 60 ಹುದ್ದೆಗಳ ವರ್ಗೀಕರಣ :–**

| | | |
|---|---|---|
| 1 | ಬಿ.ಎಸ್‌ಸಿ.(ಅರಣ್ಯ ಶಾಸ್ತ್ರ) ಪದವೀಧರರಿಗೆ | 45 |
| 2 | ವಿಜ್ಞಾನ ಮತ್ತು ಇಂಜಿನಿಯರಿಂಗ್ ಪದವೀಧರರಿಗೆ | 15 |
| | **ಒಟ್ಟು:** | **60** |

**3.3 ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013ರ ನಿಯಮದ ಅನ್ವಯ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ 12 ಬ್ಯಾಕ್‌ಲಾಗ್ ಹುದ್ದೆಗಳ ವಿವರ:–**

| | | |
|---|---|---|
| 1 | ಬಿ.ಎಸ್‌ಸಿ. (ಅರಣ್ಯ ಶಾಸ್ತ್ರ) ಪದವೀಧರರಿಗೆ | 12 |
| | **ಒಟ್ಟು:** | **12** |

**3.4 ಬಿ.ಎಸ್‌ಸಿ (ಅರಣ್ಯ ಶಾಸ್ತ್ರ) ಪದವೀಧರರಿಗೆ ಲಭ್ಯವಾಗುವ 45ಹುದ್ದೆಗಳ ಮೀಸಲಾತಿ ವರ್ಗೀಕರಣ:–**

| | **ಸಾಮಾನ್ಯ** | **ಮಾಜಿ ಸೈನಿಕ** | **ಮಹಿಳೆ** | **ಗ್ರಾಮೀಣ** | **ಕನ್ನಡ ಮಾಧ್ಯಮ** | **ಒಟ್ಟು** |
|---|---|---|---|---|---|---|
| ಪರಿಶಿಷ್ಟ ಜಾತಿ | 1 | 1 | 2 | 2 | 1 | **7** |
| ಸಾಮಾನ್ಯ ಅರ್ಹತೆ | 5 | 3 | 8 | 6 | 1 | **23** |
| ಪರಿಶಿಷ್ಟ ಪಂಗಡ | – | – | – | 1 | – | **1** |
| ಪ್ರವರ್ಗ I | – | 1 | – | 1 | – | **2** |
| ಪ್ರವರ್ಗ II(ಎ) | 2 | 1 | 2 | 2 | – | **7** |
| ಪ್ರವರ್ಗ II(ಬಿ) | – | – | 1 | 1 | – | **2** |

| | ಸಾಮಾನ್ಯ | ಮಾಜಿ ಸೈನಿಕ | ಮಹಿಳೆ | ಗ್ರಾಮೀಣ | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|
| ಪ್ರವರ್ಗ III(ಎ) | – | – | – | 1 | – | **1** |
| ಪ್ರವರ್ಗ III(ಬಿ) | – | 1 | 1 | – | – | **2** |
| ಒಟ್ಟು: | 8 | 7 | 14 | **14** | **2** | **45** |

**3.5 ವಿಜ್ಞಾನ ಮತ್ತು ಇಂಜಿನಿಯರಿಂಗ್ ಪದವೀಧರರಿಗೆ ಲಭ್ಯವಾಗುವ 15 ಹುದ್ದೆಗಳ ಮೀಸಲಾತಿ ವರ್ಗೀಕರಣ:–**

| | ಸಾಮಾನ್ಯ | ಮಾಜಿ ಸೈನಿಕ | ಮಹಿಳೆ | ಗ್ರಾಮೀಣ | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|
| ಪರಿಶಿಷ್ಟ ಜಾತಿ | 1 | – | 1 | – | – | 2 |
| ಸಾಮಾನ್ಯ ಅರ್ಹತೆ | 2 | – | 3 | 2 | 1 | 8 |
| ಪ್ರವರ್ಗ I | – | – | 1 | – | – | 1 |
| ಪ್ರವರ್ಗ II(ಎ) | 1 | – | 1 | 1 | – | 3 |
| ಪ್ರವರ್ಗ III(ಎ) | – | – | 1 | – | – | 1 |
| ಒಟ್ಟು: | 4 | 0 | 7 | **3** | **1** | **15** |

**3.6 ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಬಿ.ಎಸ್‌ಸಿ. (ಅರಣ್ಯ ಶಾಸ್ತ್ರ) ಪದವೀಧರರಿಗೆ ಲಭ್ಯವಾಗುವ 12 ಬ್ಯಾಕ್‌ಲಾಗ್ ಹುದ್ದೆಗಳ ಮೀಸಲಾತಿ ವರ್ಗೀಕರಣ :–**

| | ಸಾಮಾನ್ಯ | ಮಾಜಿ ಸೈನಿಕ | ಮಹಿಳೆ | ಗ್ರಾಮೀಣ | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|
| ಪರಿಶಿಷ್ಟ ಜಾತಿ | 2 | – | 1 | 1 | – | 4 |
| ಸಾಮಾನ್ಯ ಅರ್ಹತೆ | 1 | – | – | – | – | 1 |
| ಪರಿಶಿಷ್ಟ ಪಂಗಡ | 1 | – | – | – | – | 1 |
| ಪ್ರವರ್ಗ I | 1 | – | – | – | – | 1 |
| ಪ್ರವರ್ಗ II(ಎ) | 1 | – | 1 | – | – | 2 |
| ಪ್ರವರ್ಗ II(ಬಿ) | 1 | – | – | – | – | 1 |
| ಪ್ರವರ್ಗ III(ಎ) | 1 | – | – | – | – | 1 |
| ಪ್ರವರ್ಗ III(ಬಿ) | 1 | – | – | – | – | 1 |
| ಒಟ್ಟು: | 9 | – | 2 | **1** | – | **12** |

**3.8** ಹೈದರಾಬಾದ್–ಕರ್ನಾಟಕ ಪ್ರದೇಶದ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ತಮ್ಮ ಅರ್ಜಿಯಲ್ಲಿ ನಿಗಧಿತ ಅಂಕಣದಲ್ಲಿ ಮೀಸಲಾತಿ ಬಗ್ಗೆ ಮಾಹಿತಿ ನಮೂದಿಸುವುದು.

**3.9** ಈ ಕಚೇರಿಯ ಅಧಿಸೂಚನೆ ಸಂಖ್ಯೆ: ಬಿ9–ವಅಅ–ವಿವ–5/2014–15, ದಿನಾಂಕ 29–10–2014 ರಲ್ಲಿ ಒಟ್ಟು 110 ವಲಯ ಅರಣ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅಧಿಸೂಚನೆ ಹೊರಡಿಸಲಾಗಿತ್ತು. ಈ 110 ಹುದ್ದೆಗಳ ಪೈಕಿ 22 ಹುದ್ದೆಗಳು ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಬಿ.ಎಸ್‌ಸಿ. (ಅರಣ್ಯ ಶಾಸ್ತ್ರ) ಇವರಿಗೆ ಲಭ್ಯವಾದ ಹುದ್ದೆಗಳಾಗಿರುತ್ತದೆ. ಈ 22 ಹುದ್ದೆಗಳಲ್ಲಿ ಈ ಕಛೇರಿಯ ಪ್ರಕಟಣೆ ದಿನಾಂಕ: 20–02–2016ರ ಪ್ರಕಾರ 10 ಹುದ್ದೆಗಳಿಗೆ ಮಾತ್ರ ಅರ್ಹ ಅಭ್ಯರ್ಥಿಗಳು ಲಭ್ಯವಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಬಾಕಿ ಉಳಿದ 12 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರುವುದಿಲ್ಲ. ಹೈದರಾಬಾದ್–ಕರ್ನಾಟಕದ ಅಧಿಸೂಚನೆ ಸಂಖ್ಯೆ: ಡಿಪಿಎಆರ್/06/ಪಿಎಲ್‌ಎಕ್ಸ್/2012, ದಿನಾಂಕ: 06–11–2013ರ ಅಧಿಸೂಚನೆಯ ನಿಯಮ (8)ರನ್ವಯ **"ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿಡಲಾದ ಅಥವಾ ಹಂಚಿಕೆ ಮಾಡಲಾದ ಯಾವುದೇ ಸ್ಥಾನಗಳನ್ನು ತುಂಬಲು ಸ್ಥಳೀಯ ಅಭ್ಯರ್ಥಿ ಲಭ್ಯವಾಗದಿದ್ದರೆ, ಅಂತಹ ಸ್ಥಾನವನ್ನು ಅದನ್ನು ಮೀಸಲಿಡಲಾಗದಿದ್ದರೆ ಹೇಗೋ ಹಾಗೆ ಭರ್ತಿ ಮಾಡತಕ್ಕದ್ದು"** ಎಂದಿರುತ್ತದೆ. ಹೀಗಾಗಿ ತುಂಬಲು ಬಾಕಿ ಉಳಿದ 12 ಹುದ್ದೆಗಳಿಗೆ ಅಧಿಸೂಚನೆ ಹೊರಡಿಸಲಾಗಿದೆ.

**ವಿಶೇಷ ಸೂಚನೆ:–** ಈ ಮೇಲ್ಕಂಡ ಖಾಲಿ ಹುದ್ದೆಗಳ ವರ್ಗೀಕರಣದಲ್ಲಿ ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಯಾವುದೇ ಸಂದರ್ಭದಲ್ಲಿ ಬದಲಾವಣೆ ಮಾಡಿಕೊಳ್ಳಬಹುದಾಗಿರುತ್ತದೆ. ಈ ಮಾಹಿತಿಯನ್ನು ಕರ್ನಾಟಕ ಅರಣ್ಯ ಇಲಾಖೆಯ ವೆಬ್‌ಸೈಟ್‌ನಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗುವುದು.

4. **ಶೈಕ್ಷಣಿಕ ವಿದ್ಯಾರ್ಹತೆ:** ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಈ ಕೆಳಕಂಡ ವಿದ್ಯಾರ್ಹತೆಯನ್ನು ಅಭ್ಯರ್ಥಿಯು ಹೊಂದಿರಬೇಕು.

4.1 ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ ಅರಣ್ಯ ವಿಷಯದಲ್ಲಿ ಪದವೀಧರರಾಗಿರಬೇಕು; ಅಥವಾ

4.2 ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ:

ಅ) ಕೃಷಿ, ಅಥವಾ

ಆ) ತೋಟಗಾರಿಕೆ, ಅಥವಾ

ಇ) ಪಶುವಿಜ್ಞಾನ ವಿಷಯದಲ್ಲಿ ಪದವೀಧರರಾಗಿರಬೇಕು.

**ಅಥವಾ**

ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ ಈ ಕೆಳಗಿನ ವಿಷಯಗಳಲ್ಲಿ ಯಾವುದಾದರು ಎರಡು ಅಥವಾ ಅದಕ್ಕಿಂತ ಹೆಚ್ಚು ವಿಷಯಗಳನ್ನು ಒಳಗೊಂಡಂತೆ ಬಿ.ಎಸ್‌ಸಿ.ಪದವೀಧರರಾಗಿರಬೇಕು ಮತ್ತು ಎಲ್ಲಾ ವಾರ್ಷಿಕ ಸೆಮಿಸ್ಟರುಗಳಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚು ವಿಷಯಗಳನ್ನು ಒಳಗೊಂಡಂತೆ ಓದಿರತಕ್ಕದ್ದು.

**ವಿಷಯಗಳು:– ಗಣಿತಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ, ಬಯೋ–ಕೆಮೆಸ್ಟ್ರಿ, ಮೈಕ್ರೋ–ಬಯಾಲಜಿ, ಬಯೋ–ಟೆಕ್ನಾಲಜಿ;** ಅಥವಾ

ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ ಬ್ಯಾಚುಲರ್ ಆಫ್ ಇಂಜಿನಿಯರಿಂಗ್ ಪದವಿ ಪಡೆದಿರಬೇಕು.

**5. ಮೇಲಿನ ಪದವಿ ಪರೀಕ್ಷೆಗಳಲ್ಲಿ ನಿಗದಿಪಡಿಸಿದ ಗರಿಷ್ಠ ಅಂಕಗಳಿಗೆ ಶೇಕಡ 50 ಕ್ಕಿಂತ ಕಡಿಮೆ ಇಲ್ಲದ ಅಂಕ ಪಡೆದು ತೇರ್ಗಡೆಯಾಗಿರಬೇಕು(ಎಲ್ಲಾ ವಾರ್ಷಿಕ/ಸೆಮಿಸ್ಟರ್ ಪರೀಕ್ಷೆಗಳು ಕೂಡಿ). ಇಂತಹ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಲು ಅರ್ಹರು.**

**6. ವಯೋಮಿತಿ:–**

6.1 ಅರ್ಜಿಯನ್ನು ಆಹ್ವಾನಿಸಿ ಜಾರಿ ಮಾಡಲಾಗಿರುವ ಈ ಅಧಿಸೂಚನೆಯ ದಿನಾಂಕಕ್ಕೆ ಅಭ್ಯರ್ಥಿಯು 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಮತ್ತು ಈ ಕೆಳಗಿನ ವಯೋಮಿತಿಗಳನ್ನು ಮೀರಿರಬಾರದು.

| | | |
|---|---|---|
| 1. | ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ ಮತ್ತು ಪ್ರವರ್ಗ–1 | 32 ವರ್ಷ |
| 2. | ಪ್ರವರ್ಗ 2ಎ, 2ಬಿ, 3ಎ, 3ಬಿ | 30 ವರ್ಷ |
| 3. | ಇತರರು | **27 ವರ್ಷ** |

**6.2 ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಯೋಮಿತಿ:–**ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿ ನಿಯಮಾನುಸಾರ ನಿವೃತ್ತಿ / ಡಿಮೊಬಿಲೈಸೇಷನ್ (Demobilisation) ಅಥವಾ ರಿಟ್ರೆಂಚ್‌ಮೆಂಟ್ (Retrenchment) ಹೊಂದಿದ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅವರು ಯಾವ ಪ್ರವರ್ಗಕ್ಕೆ ಸೇರಿರುತ್ತಾರೆಯೊ ಆ ಪ್ರವರ್ಗಕ್ಕೆ ಮೇಲಿನ ಸಂಖ್ಯೆ: 6.1 ರಲ್ಲಿ ನಿಗಧಿಪಡಿಸಿದ ಗರಿಷ್ಠ ವಯೋಮಿತಿಗೆ ಅವರು ಎಷ್ಟು ವರ್ಷ ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳಿಗೆ ಮೂರು (3) ವರ್ಷ ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.

**ವಿವರಣೆ: "**ಮಾಜಿ ಸೈನಿಕ**"**ಎಂದರೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರಲ್ಲಿ ಅರ್ಥೈಸಿರುವಂತಾಗಿದೆ. ಈ ಪದದ ಅರ್ಥ ವಿವರಣೆ ಈ ಕೆಳಕಂಡಂತಿದೆ:–

2(1)(i) "Ex-serviceman" means a person, who has served in any rank (whether as a regular Army, Navy and Combatant or as a Non-Combatant) in the regular Army, Navy and Air Force of the Union but does not include a person who has served in the Defence Security Corps, the General Reserved Engineering Force, the Lok Sahayak Sena and the Para Military Forces; and

(a) who has retired from such service after earning his pension; or

(b) who has been released from such service on Medical Grounds attributable to military service or circumstances beyond his control and awarded medical or other disability pension; or

(c) who has been released otherwise than on his own request from such service as a result of reduction in establishment; or

(d) who has been released from such service after completing the specific period of engagement otherwise than at his own request or by way of dismissal or discharge on account of mis-conduct or inefficiency and has been given a gratuity.

and includes personnel of the Territorial Army of the following categories namely:-

(i) pension holders for continuous embodied service;

(ii) persons with disability attributable to military service; and

(iii) gallantry award winners.

Explanation: The persons serving in the armed forces of the union, who on retirement from service, would come under the category of ex-serviceman may be permitted to apply for re-employment one year before the completion of the specified terms of agreement and avail themselves of all concessions available to ex-servicemen, but shall not be appointed to a State Civil Service or Post until they are permitted to leave the uniform.

**7. ಸ್ವೀಕೃತ On-line ಅರ್ಜಿಗಳ ಪರಾಮರ್ಶೆ:**

ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ)(ತಿದ್ದುಪಡಿ) ನಿಯಮಗಳು, 2012 ಮತ್ತು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮ, 2013ರ ಅನ್ವಯ ವಲಯ ಅರಣ್ಯಾಧಿಕಾರಿ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ನೇರ ನೇಮಕಾತಿ ಮೂಲಕ ತುಂಬಲು ಪ್ರಸ್ತುತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ಮೀಸಲಾತಿ ವರ್ಗೀಕರಣ ಮಾಡಲಾಗಿದೆ. ಅಭ್ಯರ್ಥಿಯು

ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ಮತ್ತು ಅರ್ಜಿಯೊಂದಿಗೆ ಅಪ್‌ಲೋಡ್ ಮಾಡಿರುವ ಎಲ್ಲಾ ದಾಖಲಾತಿಗಳ ಆಧಾರದ ಮೇಲೆ ಅರ್ಜಿಯನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು. ಕ್ರಮಬದ್ಧವಲ್ಲದ, ಅಪೂರ್ಣಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಪ್ರಾರಂಭಿಕ ಹಂತದಲ್ಲೇ ತಿರಸ್ಕರಿಸಲಾಗುವುದು. ಇದಲ್ಲದೆ ಅಪ್‌ಲೋಡ್ ಮಾಡಬೇಕಾಗಿರುವ ದಾಖಲೆಗಳ ಪೈಕಿ ಯಾವುದಾದರೂ ದಾಖಲೆಗಳನ್ನು ಅಪ್‌ಲೋಡ್ ಮಾಡದೆ ಇದ್ದಲ್ಲಿ ಅಭ್ಯರ್ಥಿಯ ಅರ್ಜಿಯನ್ನು ತಿರಸ್ಕರಿಸಲಾಗುವುದು.

**7.1 ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ:(ವಿಶೇಷ ಸೂಚನೆ)**

**ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ವಿವರಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಶಾಲಾ ದಾಖಲಾತಿ ಪ್ರಮಾಣ ಪತ್ರಗಳು) ಶೈಕ್ಷಣಿಕ ಅರ್ಹತೆ, ಮೀಸಲಾತಿ, ಇತ್ಯಾದಿಗಳನ್ನು ಅರ್ಜಿ ಸಲ್ಲಿಸುವ ವೇಳೆ ವೆಬ್‌ಸೈಟ್‌ಗೆ ಅಪ್‌ಲೋಡ್ ಮಾಡತಕ್ಕದ್ದು, ಈ ರೀತಿ ಅಪ್‌ಲೋಡ್ ಮಾಡಿರುವ ದಾಖಲೆಗಳ ಪರಿಶೀಲನೆಯನ್ನು ಸೂಚಿತ ದಿನಾಂಕದಂದು ಆಯ್ಕೆ ಪ್ರಾಧಿಕಾರ ಅಥವಾ ಮುಖ್ಯ ಪರೀಕ್ಷಕರ ಅಥವಾ ಅವರು ನಿಯಮಿಸಿರುವ ಅಧಿಕಾರಿಗಳ ಎದುರು ಪರಿಶೀಲನೆಗೆ ಮೂಲ ದಾಖಲೆಗಳನ್ನು ಕಡ್ಡಾಯವಾಗಿ ಹಾಜರುಪಡಿಸಬೇಕು. ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಹಾಜರುಪಡಿಸಲು ಯಾವುದೇ ಕಾರಣಕ್ಕೂ ಮತ್ತು ಯಾವುದೇ ಸನ್ನಿವೇಶದಲ್ಲಿಯೂ ಕಾಲ ವಿಸ್ತರಣೆ ನೀಡಲಾಗುವುದಿಲ್ಲ. ಒಂದು ವೇಳೆ, On-line ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವೆಬ್‌ಸೈಟ್‌ಗೆ ಅಪ್‌ಲೋಡ್ ಮಾಡಿರುವ ಮಾಹಿತಿ/ಮೂಲ ದಾಖಲೆಗಳ ಪರಿಶೀಲನಾ ವೇಳೆ ಹಾಜರುಪಡಿಸುವ ದಾಖಲೆಗಳಲ್ಲಿ ಯಾವುದೇ ರೀತಿಯ ಗೊಂದಲ/ವ್ಯತಿರಿಕ್ತ ದಾಖಲೆ/ಪ್ರಮಾಣ ಪತ್ರಗಳನ್ನು ಸಲ್ಲಿಸಿದಲ್ಲಿ ಅಂತಹ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಂಡು ಅರ್ಜಿಯಲ್ಲಿನ ಮಾಹಿತಿಯನ್ನು ಬದಲಾವಣೆ ಮಾಡಲಾಗುವುದಿಲ್ಲ. ಅಭ್ಯರ್ಥಿಯು ಅರ್ಜಿ ಸಲ್ಲಿಸುವಾಗ ಎಲ್ಲಾ ದಾಖಲೆಗಳನ್ನು ಪಡೆದಿಟ್ಟುಕೊಂಡು ಅರ್ಜಿಯನ್ನು ಸಲ್ಲಿಸತಕ್ಕದ್ದು. ಒಂದು ವೇಳೆ, ಅರ್ಜಿಯಲ್ಲಿ ನಮೂದಿಸಿರುವ ದಾಖಲೆಗಳನ್ನು ಸಲ್ಲಿಸಲು ವಿಫಲರಾದಲ್ಲಿ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸದ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.ಅಭ್ಯರ್ಥಿಯುಎಲ್ಲಾ ಸಂಧರ್ಭದಲ್ಲಿಒಂದೇ ತರಹದ ದಾಖಲೆಗಳನ್ನು ಸಲ್ಲಿಸತಕ್ಕದ್ದು, ಈ ಬಗ್ಗೆ ಅಭ್ಯರ್ಥಿ ಬಹಳ ಎಚ್ಚರಿಕೆ ವಹಿಸಲು ಸೂಚಿಸಿದೆ. ವಿಭಿನ್ನ ಮಾಹಿತಿಗಳನ್ನು ಸಲ್ಲಿಸಿದ್ದಲ್ಲಿ ಅಭ್ಯರ್ಥಿಯ ಅರ್ಜಿಯನ್ನು ತಿರಸ್ಕರಿಸಲಾಗುವುದು.**

**8.** **ಆಯ್ಕೆ ವಿಧಾನ:**

ಅ) ಪೂರ್ವಭಾವಿ ಪರೀಕ್ಷೆ – 200 ಅಂಕಗಳು

ಆ) ಮುಖ್ಯ ಪರೀಕ್ಷೆ – 200 ಅಂಕಗಳು

**8.1** **(ಅ) ಪೂರ್ವಭಾವಿ ಪರೀಕ್ಷೆ:** ಮೂಲ ದಾಖಲೆಗಳ ಪರಿಶೀಲನೆಯಲ್ಲಿ ಅರ್ಹತೆ ಹೊಂದಿದ ಅರ್ಹ ಅಭ್ಯರ್ಥಿಗಳಿಗೆ ಪೂರ್ವಭಾವಿ ಪರೀಕ್ಷೆ ನಡೆಸಲಾಗುವುದು. ಪೂರ್ವಭಾವಿ ಪರೀಕ್ಷೆಯ ವಿಷಯಗಳು ಮತ್ತು ಅಂಕಗಳ ವಿವರ ಈ ಕೆಳಗಿನಂತಿದೆ:–

| ವಿಷಯಗಳು | ಅಂಕಗಳು | ವಿವರ |
|---|---|---|
| 1. ಸಾಮಾನ್ಯ ಜ್ಞಾನ | 100 ಅಂಕಗಳು | As per Syllabus |
| 2. ಆಪ್ಟಿಟ್ಯೂಡ್ ಪರೀಕ್ಷೆ | 100 ಅಂಕಗಳು | As per Syllabus |

**ಪೂರ್ವಭಾವಿ ಪರೀಕ್ಷಾ ಕೇಂದ್ರಗಳು:** (1) ಬೆಂಗಳೂರು (2) ಬೆಳಗಾವಿ (3) ಬಳ್ಳಾರಿ (4) ಧಾರವಾಡ

(5) ಕಲಬುರಗಿ (6) ಮಂಗಳೂರು (7) ಮೈಸೂರು (8) ಶಿವಮೊಗ್ಗ.

**8.2** **ಆ) ಮುಖ್ಯ ಪರೀಕ್ಷೆ:** ಪೂರ್ವಭಾವಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಮೆರಿಟ್ ಆಧಾರದಂತೆ ಪ್ರತಿ ಹುದ್ದೆಗೆ ಹತ್ತು ಅಭ್ಯರ್ಥಿಗಳಂತೆ 1:10 (ಹುದ್ದೆ:ಪೂರ್ವಭಾವಿ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿ) ಅನುಪಾತದಲ್ಲಿ ಅಭ್ಯರ್ಥಿಗಳನ್ನು ಮುಖ್ಯ ಪರೀಕ್ಷೆಗೆ ಹಾಜರಾಗಲು ಪ್ರಚಲಿತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ಆಯ್ಕೆ ಮಾಡಲಾಗುವುದು. ಮುಖ್ಯ ಪರೀಕ್ಷೆಯ ವಿಷಯಗಳ ಮತ್ತು ಅಂಕಗಳ ವಿವರ ಈ ಕೆಳಗಿನಂತಿದೆ:–

**I. ಕಡ್ಡಾಯ ಪತ್ರಿಕೆಗಳು – ಭಾಷಾ ಪರೀಕ್ಷೆ (ಎಲ್ಲಾ ಅಭ್ಯರ್ಥಿಗಳಿಗೆ ಅನ್ವಯ)**

| | ವಿಷಯಗಳು | ಅಂಕಗಳು | ವಿವರ |
|---|---|---|---|
| 1 | ಕನ್ನಡ<br>(ಅರ್ಹತಾ ಪರೀಕ್ಷೆ) | 100 ಅಂಕಗಳು (ಕನಿಷ್ಟ 35 ಅಂಕಗಳನ್ನು ಗಳಿಸಬೇಕು. ಈ ಅಂಕಗಳನ್ನು ಮೆರಿಟ್ ನಿಗಧಿಪಡಿಸಲು ಗಣನೆಗೆ ತೆಗೆದುಕೊಳ್ಳುವುದಿಲ್ಲ) | As per Syllabus |
| 2 | ಇಂಗ್ಲೀಷ್<br>(ಅರ್ಹತಾ ಪರೀಕ್ಷೆ) | 100 ಅಂಕಗಳು (ಕನಿಷ್ಟ 35 ಅಂಕಗಳನ್ನು ಗಳಿಸಬೇಕು. ಈ ಅಂಕಗಳನ್ನು ಮೆರಿಟ್ ನಿಗಧಿಪಡಿಸಲು ಗಣನೆಗೆ ತೆಗೆದುಕೊಳ್ಳುವುದಿಲ್ಲ) | As per Syllabus |

**II(ಅ). ಬಿ.ಎಸ್‌ಸಿ.(ಅರಣ್ಯಶಾಸ್ತ್ರ) ಪದವೀಧರರಿಗೆ (Optional Subjects):**

| | ವಿಷಯ | ಅಂಕಗಳು | ವಿವರ |
|---|---|---|---|
| 1 | ಅರಣ್ಯ ವಿಷಯ – ಪತ್ರಿಕೆ–1 | 100 ಅಂಕಗಳು | As per Syllabus |
| 2 | ಅರಣ್ಯ ವಿಷಯ – ಪತ್ರಿಕೆ–2 | 100 ಅಂಕಗಳು | As per Syllabus |

**ಸೂಚನೆ:–** ಅರಣ್ಯ ವಿಷಯ–ಪತ್ರಿಕೆ–1 ಮತ್ತು ಅರಣ್ಯ ವಿಷಯ–ಪತ್ರಿಕೆ–2, ಈ ವಿಷಯಗಳನ್ನು ಬಿ.ಎಸ್‌ಸಿ. (ಅರಣ್ಯ ಶಾಸ್ತ್ರ)ಪದವೀಧರರು ಮಾತ್ರ ಆಯ್ಕೆ ಮಾಡುವಂತೆ ನಿರ್ಬಂಧಿಸಲಾಗಿದೆ.

**II(ಆ). ಐಚ್ಚಿಕ ವಿಷಯಗಳು (Optional Subjects) ಕ್ರಮ ಸಂಖ್ಯೆ: 4.2 ರಲ್ಲಿ ನಮೂದಿಸಿರುವ ಪದವೀಧರರಿಗೆ :**

| | ವಿಷಯ | ಅಂಕಗಳು | ವಿವರ |
|---|---|---|---|
| 1 | ಸಸ್ಯಶಾಸ್ತ್ರ (Botany) | 100 ಅಂಕಗಳು | As per Syllabus |
| 2 | ಪ್ರಾಣಿಶಾಸ್ತ್ರ (Zoology) | 100 ಅಂಕಗಳು | |
| 3 | ಗಣಿತಶಾಸ್ತ್ರ (Mathematics) | 100 ಅಂಕಗಳು | |
| 4 | ರಸಾಯನಶಾಸ್ತ್ರ (Chemistry) | 100 ಅಂಕಗಳು | |
| 5 | ಭೌತಶಾಸ್ತ್ರ (Physics) | 100 ಅಂಕಗಳು | |
| 6 | ಕೃಷಿ (Agriculture) | 100 ಅಂಕಗಳು | |
| 7 | ಸಿವಿಲ್ ಇಂಜಿನಿಯರಿಂಗ್ | 100 ಅಂಕಗಳು | |

ಮೇಲೆ ಹೇಳಿದ ಐಚ್ಚಿಕ ವಿಷಯಗಳ ಪೈಕಿ ಅಭ್ಯರ್ಥಿ ಬಯಸುವ ಯಾವುದಾದರೂ ಎರಡು ಐಚ್ಚಿಕ ವಿಷಯಗಳನ್ನು ಮುಖ್ಯ ಪರೀಕ್ಷೆಗೆ ಆಯ್ಕೆ ಮಾಡಿಕೊಳ್ಳಬಹುದು. ಮುಖ್ಯ ಪರೀಕ್ಷೆಗೆ ಆಯ್ದುಕೊಂಡ ಐಚ್ಚಿಕ ವಿಷಯಗಳನ್ನು ಅರ್ಜಿಯಲ್ಲಿ ನಮೂದಿಸಬೇಕು.

**ಸೂಚನೆ:–**

1. ಅಭ್ಯರ್ಥಿಗಳು ಆಯ್ಕೆ ಮಾಡಿಕೊಂಡಿರುವ ಎಲ್ಲಾ ಪರೀಕ್ಷೆಗಳಿಗೆ ಕಡ್ಡಾಯವಾಗಿ ಹಾಜರಾಗಬೇಕು. ಯಾವುದೇ ಒಂದು ಪರೀಕ್ಷೆಗೆ ಗೈರುಹಾಜರಾದರೂ ಸಹ ಉಳಿದ ಪತ್ರಿಕೆಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸಲಾಗುವುದಿಲ್ಲ ಹಾಗೂ ಉಳಿದ ಪತ್ರಿಕೆಗಳಲ್ಲಿ ಎಷ್ಟು ಅಂಕಗಳನ್ನು ಗಳಿಸಿದರೂ ಸಹ ಇಂತಹ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದಿಲ್ಲ.ಅಭ್ಯರ್ಥಿಗಳು ಉತ್ತರ ಪತ್ರಿಕೆಯಲ್ಲಿ ಪ್ರಶ್ನೆ ಪತ್ರಿಕೆಯ ಸಂಖ್ಯೆ ಅಥವಾ ಕೋಡ್ ಬರೆಯದಿದ್ದಲ್ಲಿ ಅಂತಹ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.
2. ಅಭ್ಯರ್ಥಿಗಳ ಉತ್ತರ ಪತ್ರಿಕೆಗಳನ್ನು ಯಾವುದೇ ಕಾರಣಕ್ಕೂ ಮರುಮೌಲ್ಯಮಾಪನ ಮಾಡಲಾಗುವುದಿಲ್ಲ.
3. ಕಡ್ಡಾಯ ಪತ್ರಿಕೆಗಳಾದ ಕನ್ನಡ ಮತ್ತು ಆಂಗ್ಲ ಭಾಷಾ ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳು ಉಳಿದ ಪತ್ರಿಕೆಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸಲಾಗುವುದಿಲ್ಲ.
4. ಭಾಷಾ ವಿಷಯಗಳ ಪ್ರಶ್ನೆ ಪತ್ರಿಕೆಯನ್ನು ಹೊರತುಪಡಿಸಿ ಉಳಿದಂತೆ ಎಲ್ಲಾ ವಿಷಯಗಳ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಇರುತ್ತವೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಇಂಗ್ಲೀಷ್ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು. ಅಭ್ಯರ್ಥಿಯು ತನ್ನ ಪ್ರಶ್ನೆ ಪತ್ರಿಕೆಗಳನ್ನು ಸಂಪೂರ್ಣವಾಗಿ ಕನ್ನಡ ಅಥವಾ ಇಂಗ್ಲೀಷ್ ಮಾಧ್ಯಮದಲ್ಲಿ ಉತ್ತರಿಸತಕ್ಕದ್ದು. ಅರ್ಧ ಕನ್ನಡ ಅಥವಾ ಅರ್ಧ ಇಂಗ್ಲೀಷ್ ಮಾಧ್ಯಮದಲ್ಲಿ ಉತ್ತರಿಸಿದಲ್ಲಿ ಅಂತಹ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನಗೊಳಿಸುವುದಿಲ್ಲ.

**8.3** ಪರೀಕ್ಷಾ ಪ್ರಶ್ನೆ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವುದು. ಅಭ್ಯರ್ಥಿಗಳು ಯಾವ ಮಾಧ್ಯಮದಲ್ಲಿ ಪ್ರಶ್ನೆಪತ್ರಿಕೆಗಳಿಗೆ ಉತ್ತರಿಸುತ್ತಾರೆಂಬುದನ್ನು ಅರ್ಜಿ ನಮೂನೆಯಲ್ಲಿ ಕಡ್ಡಾಯವಾಗಿ ನಮೂದಿಸಬೇಕು. ಒಮ್ಮೆ ಆಯ್ಕೆ ಮಾಡಿಕೊಂಡ ಮಾಧ್ಯಮವನ್ನು ಯಾವುದೇ ಕಾರಣಕ್ಕೆ ಬದಲಾಯಿಸಿಕೊಳ್ಳಲು ಅವಕಾಶವಿರುವುದಿಲ್ಲ.

**8.4** ಪೂರ್ವಭಾವಿ ಪರೀಕ್ಷೆಗಳಾದ ಸಾಮಾನ್ಯ ಜ್ಞಾನ ಹಾಗೂ ಆಪ್ಟಿಟ್ಯೂಡ್ ಪರೀಕ್ಷೆಗಳಲ್ಲಿ ಪಡೆದ ಅಂಕಗಳು ಮತ್ತು ಮುಖ್ಯ ಪರೀಕ್ಷೆಯ ಐಚ್ಚಿಕ ವಿಷಯಗಳಲ್ಲಿ ಅಭ್ಯರ್ಥಿಯು ಗಳಿಸಿದ ಒಟ್ಟು ಅಂಕಗಳ ಮೆರಿಟ್ ಆಧಾರದ ಮೇಲೆ ಬಿ.ಎಸ್‌ಸಿ.(ಅರಣ್ಯ ಶಾಸ್ತ್ರ) ಪದವೀಧರ ಮತ್ತು ವಿಜ್ಞಾನ/ಇಂಜಿನಿಯರಿಂಗ್ ಪದವೀಧರ ಅಭ್ಯರ್ಥಿಗಳನ್ನು ಪ್ರಚಲಿತ ಮೀಸಲಾತಿ ನಿಯಮಾನುಸಾರ 1:2 (ಹುದ್ದೆ:ಅಭ್ಯರ್ಥಿ)ಅನುಪಾತದಲ್ಲಿ ಆಯ್ಕೆ ಮಾಡಿ ಪಟ್ಟಿಯನ್ನು ತಯಾರಿಸಲಾಗುವುದು. ಒಂದುವೇಳೆ ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳು ಸಮಾನವಾದ ಅಂಕಗಳನ್ನು ಗಳಿಸಿದ ಸಂದರ್ಭದಲ್ಲಿ ವಯಸ್ಸಿನ ಆಧಾರದ ಮೇಲೆ ಅಂದರೆ ವಯಸ್ಸಿನಲ್ಲಿ ಹಿರಿಯರಾದ ಅಭ್ಯರ್ಥಿಗಳನ್ನು ಮೆರಿಟ್‌ನಲ್ಲಿ ಮೇಲೆತರಲಾಗುವುದು.

**9.** ಈ ರೀತಿ ಆಯ್ಕೆ ಮಾಡಿದ ಅಭ್ಯರ್ಥಿಗಳು ಇಲಾಖೆ ನಡೆಸುವ ದೇಹದಾರ್ಢ್ಯತೆ, ವೈದ್ಯಕೀಯ ಪರೀಕ್ಷೆ ಹಾಗೂ ದೈಹಿಕ ತಾಳ್ವಿಕೆ ಪರೀಕ್ಷೆಗಳಿಗೆ ಹಾಜರಾಗಬೇಕು.

10. ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆ:

ದೇಹದಾರ್ಢ್ಯತೆ ಪರೀಕ್ಷೆ ಮತ್ತು ವೈದ್ಯಕೀಯ ಪರೀಕ್ಷೆಯನ್ನು ಜಿಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ Civil Surgeon/Chief Medical Officer/Medical Superintendent ರವರ ದರ್ಜೆಗಿಂತ ಕಡಿಮೆ ಇರದ ವೈದ್ಯಾಧಿಕಾರಿಗಳಿಂದ ಈ ಕೆಳಕಂಡ ಮಾನದಂಡಗಳಂತೆ ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳನ್ನು ಇಲಾಖಾ ಮುಖಾಂತರ ನಡೆಸಲಾಗುವುದು. ಸೂಚಿತ ದಿನಾಂಕದಂದು ನಡೆಸುವ ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳಿಗೆ ಗೈರುಹಾಜರಾಗುವ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ ಯಾವುದೇ ಸಂದರ್ಭದಲ್ಲಿಯೂ ಎರಡನೇ ಬಾರಿ ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲು ಅವಕಾಶ ನೀಡಲಾಗುವುದಿಲ್ಲ. ಗೈರುಹಾಜರಾಗುವ ಅಭ್ಯರ್ಥಿಗಳನ್ನು ಅನರ್ಹ ಅಭ್ಯರ್ಥಿಗಳೆಂದು ಪರಿಗಣಿಸಲಾಗುವುದು. ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳಲ್ಲಿ ಅನರ್ಹಗೊಂಡ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ದೇಹದಾರ್ಢ್ಯತೆ ಮತ್ತು ವೈದ್ಯಕೀಯಪರೀಕ್ಷೆಗಳು ಈ ಕೆಳಕಂಡಂತಿರುತ್ತವೆ.

**10.1 ದೇಹದಾರ್ಢ್ಯತೆ ಪರೀಕ್ಷೆ:**

ಶಾರೀರಿಕ ಮಾನದಂಡ: ಅಭ್ಯರ್ಥಿಗಳು ಈ ಕೆಳಗಿನ ಕನಿಷ್ಠ ಶಾರೀರಿಕ ಮಾನದಂಡ ಹೊಂದಿರಬೇಕು.

**10.2 ಪುರುಷರಿಗೆ:**

| | | | |
|---|---|---|---|
| 1) | ಎತ್ತರ | : | 163 ಸೆ.ಮೀ. |
| 2) | ಎದೆ ಸುತ್ತಳತೆ | : | ಸಾಮಾನ್ಯ ಸ್ಥಿತಿಯಲ್ಲಿ: 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ : 5 ಸೆ.ಮೀ. |

10.3 ಮಹಿಳೆಯರಿಗೆ:

| | | | |
|---|---|---|---|
| 1) | ಎತ್ತರ | : | 150 ಸೆ.ಮೀ. |
| 2) | ಎದೆ ಸುತ್ತಳತೆ | : | ಸಾಮಾನ್ಯ ಸ್ಥಿತಿಯಲ್ಲಿ: 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ : 5 ಸೆ.ಮೀ. |

**11. ವೈದ್ಯಕೀಯ ಪರೀಕ್ಷೆ:**

**11.1 ದೃಷ್ಠಿ ಸಾಮರ್ಥ್ಯ:**

ಅಭ್ಯರ್ಥಿಗಳು ಈ ಕೆಳಗೆ ನಿಗಧಿಪಡಿಸಿರುವ ಅಂತರದ ದೃಷ್ಟಿ ಸಾಮರ್ಥ್ಯವನ್ನು ಕನ್ನಡಕ ಸಹಿತ ಅಥವಾ ಕನ್ನಡಕ ರಹಿತ ಕಡ್ಡಾಯವಾಗಿ ಹೊಂದಿರಬೇಕು.

| **ದೂರ ದೃಷ್ಠಿ** | | | **ಸಮೀಪ ದೃಷ್ಠಿ** | | |
|---|---|---|---|---|---|
| ದೋಷರಹಿತ ಕಣ್ಣು | ಅಥವಾ | ದೋಷಪೂರಿತ ಕಣ್ಣು | ದೋಷರಹಿತ ಕಣ್ಣು | ಅಥವಾ | ದೋಷಪೂರಿತ ಕಣ್ಣು |
| 6/6 ಮೀಟರ್ | | 6/9 ಮೀಟರ್ | 0/6 ಮೀಟರ್ | | 0/8 ಮೀಟರ್ |

ಪ್ರತಿಯೊಂದು ಕಣ್ಣು ಪೂರ್ಣ ದೃಶ್ಯವನ್ನು ನೋಡುವ ಸಾಮರ್ಥ್ಯವನ್ನು ಹೊಂದಿರಬೇಕು. ಬಣ್ಣ ಕುರುಡು, ಮೆಳ್ಳೆಗಣ್ಣು ಅಥವಾ ಯಾವುದೇ ರೀತಿಯ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

**11.2 ಶ್ರವಣಶಕ್ತಿ:** ಅಭ್ಯರ್ಥಿಗಳ ಶ್ರವಣ ಶಕ್ತಿಯನ್ನು ಪರೀಕ್ಷಿಸಲು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

1. ರಿನ್ನರ್ಸ್ ಟೆಸ್ಟ್
2. ವೆಬ್ಬರ್ಸ್ ಟೆಸ್ಟ್
3. ಟೆಸ್ಟ್ ಫಾರ್ ವರ್ಟಿಗೋ

ಮೇಲಿನ ಪರೀಕ್ಷೆಗಳಲ್ಲಿ ಯಾವುದಾದರೂ ಶ್ರವಣ ದೋಷವಿದೆಯೆಂದು ಸಾಬೀತಾದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಗೆ ಅರ್ಹರಲ್ಲ.

**11.3 ಕೆಳಕಂಡ ಅಂಗವಿಕಲತೆಯಿರುವವರು ಆಯ್ಕೆಗೆ ಅರ್ಹರಲ್ಲ.**

1. ತೊಡರುಗಾಲು (knock knees)
2. ಬಾಗಿದ ಕಾಲು (Bow legs)
3. ಸಮತಟ್ಟಾದ ಪಾದ (Flat feet)
4. ನರ ಊತವಿರುವವರು (Varicose Veins)

ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಹಾಜರಾಗಲು ಅರ್ಹತೆ ಪಡೆಯುತ್ತಾರೆ.

**11.4 ದೈಹಿಕ ತಾಳ್ವಿಕೆ ಪರೀಕ್ಷೆ:**

| | | |
|---|---|---|
| ಪುರುಷ ಅಭ್ಯರ್ಥಿಗಳಿಗೆ | : | 25 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು |
| ಮಹಿಳಾ ಅಭ್ಯರ್ಥಿಗಳಿಗೆ | : | 16 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು. |

ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ಯಾವುದೇ ಸಂದರ್ಭದಲ್ಲಿ ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳಿಗೆ ಎರಡನೇ ಭಾರಿ ದೈಹಿಕ ತಾಳ್ವಿಕೆ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ.

**ಸೂಚನೆ:**–ಅಭ್ಯರ್ಥಿಗಳು ನೇಮಕಾತಿ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

**12.1** ದೇಹದಾರ್ಢ್ಯತೆ ಪರೀಕ್ಷೆ, ವೈದ್ಯಕೀಯ ಪರೀಕ್ಷೆ ಹಾಗೂ ದೈಹಿಕ ತಾಳ್ವಿಕೆ ಪರೀಕ್ಷೆಗಳನ್ನು ಯಶಸ್ವಿಯಾಗಿ ಪೂರೈಸಿದ ಅಭ್ಯರ್ಥಿಗಳ ಪೈಕಿ ಪೂರ್ವಭಾವಿ ಮತ್ತು ಮುಖ್ಯ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಮೆರಿಟ್ ಆಧಾರದ ಮೇಲೆ ಮತ್ತು ಪ್ರಚಲಿತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ನೇರ ನೇಮಕಾತಿಗಾಗಿ ಹೊರಡಿಸಲಾದ ಅಧಿಸೂಚನೆಯಲ್ಲಿ ಸೂಚಿಸಿರುವ ಖಾಲಿ ಹುದ್ದೆಗಳಿಗೆ ಸಮನಾದ ಸಂಖ್ಯೆಯಲ್ಲಿ ಅಭ್ಯರ್ಥಿಗಳನ್ನು ವಲಯ ಅರಣ್ಯಾಧಿಕಾರಿ ಹುದ್ದೆಗೆ ಆಯ್ಕೆ ಮಾಡಲಾಗುವುದು.

**12.2** ಆಯ್ಕೆಯಾದ ಅಭ್ಯರ್ಥಿಗಳನ್ನು ಅರಣ್ಯ ಇಲಾಖೆಯಲ್ಲಿ ₹. 21600–600–24600–700–28800–800–33600–900–39000–1050–40050ರ ವೇತನ ಶ್ರೇಣಿಯಲ್ಲಿ ಮೂರು ವರ್ಷಗಳ ಪರೀಕ್ಷಾರ್ಥ ಅವಧಿಯ ಮೇಲೆ ವಲಯ ಅರಣ್ಯಾಧಿಕಾರಿಗಳನ್ನಾಗಿ ನೇಮಕಾತಿ ಪ್ರಾಧಿಕಾರದಿಂದ ನೇಮಕ ಮಾಡಲಾಗುವುದು ಮತ್ತು ಅವರನ್ನು ಭಾರತ ಸರ್ಕಾರದ ನಿಯಂತ್ರಣದಲ್ಲಿರುವ ಯಾವುದಾದರೂ ವಲಯ ಅರಣ್ಯಾಧಿಕಾರಿ ಹುದ್ದೆಯ ತರಬೇತಿ ವಿದ್ಯಾಲಯದಲ್ಲಿ ತರಬೇತಿಗೆ ನಿಯೋಜಿಸಲಾಗುವುದು. ತರಬೇತಿಯು 18 ತಿಂಗಳ ಅವಧಿಯದ್ದಾಗಿದೆ.

**12.3** ವಲಯ ಅರಣ್ಯಾಧಿಕಾರಿಯಾಗಿ ನೇಮಕಗೊಂಡ ನಂತರ ಸದರಿ ಅಭ್ಯರ್ಥಿಯು ತರಬೇತಿಗೆ ಹಾಜರಾಗುವ ಮೊದಲು ನೇಮಕಾತಿ ಪ್ರಾಧಿಕಾರದ ಸಮಕ್ಷಮ ರೂಪಾಯಿ 1,00,000–00 ಸಾಲ್ವೆಂಟ್ ಶೂರಿಟಿ ಹೊಂದಿರುವ ಇಬ್ಬರು ಅಥವಾ ₹. 14,550/– ಗಿಂತ ಹೆಚ್ಚು ಮಾಸಿಕ ವೇತನ ಪಡೆಯುತ್ತಿರುವ ಮತ್ತು ತರಬೇತಿ ಮುಗಿಯುವ ದಿನಾಂಕದಿಂದ ಕನಿಷ್ಠ 6 ವರ್ಷ ಸೇವಾವಧಿ ಉಳಿದಿರುವ ಇಬ್ಬರು ಸರ್ಕಾರಿ ನೌಕರರ ಜಾಮೀನು ಕೊಡಬೇಕು. ಇದು ಸಾಧ್ಯವಾಗದಿದ್ದ ಪಕ್ಷದಲ್ಲಿ ಅಭ್ಯರ್ಥಿಯು ₹. 1,00,000–00 ಮೊತ್ತದ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ), ಬೆಂಗಳೂರು ಇವರ ಹೆಸರಿಗೆ ಅಡವು ಇರಿಸಬಹುದು. ಅಭ್ಯರ್ಥಿಯು ಇಲಾಖೆಯಲ್ಲಿ ನೇಮಕಾತಿಯಾದ ದಿನಾಂಕದಿಂದ ಕನಿಷ್ಠ 5 ವರ್ಷ ಸೇವೆ ಸಲ್ಲಿಸುವುದಾಗಿ, ತಪ್ಪಿದಲ್ಲಿ ಸರ್ಕಾರವು ತರಬೇತಿಯ ಬಗ್ಗೆ ಭರಿಸಿದ ಸಂಪೂರ್ಣ ವೆಚ್ಚವನ್ನು ಮತ್ತು ತರಬೇತಿ ಅವಧಿಯಲ್ಲಿ ಪಡೆದ ವೇತನವನ್ನು ಶೇ.8 ರ ದಂಡನೆ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿ ಮಾಡಲು ಮತ್ತು ಆಯ್ಕೆ ಪ್ರಾಧಿಕಾರ ನಿಗಧಿಪಡಿಸುವ ಇತರೆ ಷರತ್ತುಗಳನ್ನು ಪೂರೈಸಲು ಸಿದ್ಧವಿರುವುದಾಗಿ ಛಾಪಾ ಕಾಗದದಲ್ಲಿ ನಿಗಧಿತ ನಮೂನೆಯಲ್ಲಿ ಅಭ್ಯರ್ಥಿಯು ಕರಾರು ಪತ್ರವನ್ನು ಬರೆದು ಕೊಡತಕ್ಕದ್ದು.

**12.4** ಒಂದು ವೇಳೆ ಅಭ್ಯರ್ಥಿಯು ಸೂಕ್ತ ಕಾರಣಗಳನ್ನು ಹೊರತುಪಡಿಸಿ (ಕಾರಣದ ಸೂಕ್ತತೆ ಬಗ್ಗೆ ಇಲಾಖೆಯ ನಿರ್ಣಯವೇ ಅಂತಿಮವಾಗುತ್ತದೆ) ಷರತ್ತುಗಳನ್ನು ಪೂರೈಸಲು ವಿಫಲವಾದಲ್ಲಿ ಅಥವಾ ತರಬೇತಿಯನ್ನು ಪೂರೈಸಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ವಿಫಲರಾದಲ್ಲಿ ಅಥವಾ ಯಾವುದೇ ಕಾರಣಕ್ಕಾಗಿ ತರಬೇತಿಯಿಂದ ತೆಗೆದು ಹಾಕಲ್ಪಟ್ಟರೆ ಅಥವಾ ಸ್ವಇಚ್ಚೆಯಿಂದ ತರಬೇತಿ ಮಧ್ಯದಲ್ಲಿ ಬಿಟ್ಟುಬಿಟ್ಟರೆ ಅಥವಾ ಪರೀಕ್ಷಾರ್ಥ ಅವಧಿಯನ್ನು ಯಶಸ್ವಿಯಾಗಿ ಪೂರೈಸದಿದ್ದರೆ ಸರ್ಕಾರವು ಅಭ್ಯರ್ಥಿಯ ತರಬೇತಿಗಾಗಿ ಭರಿಸಿದ ವೆಚ್ಚವನ್ನು ಮತ್ತು ತರಬೇತಿ ಅವಧಿಯಲ್ಲಿ ಪಡೆದ ವೇತನವನ್ನು ಮೇಲೆ ನಿಗಧಿಪಡಿಸಿದ ದರದಲ್ಲಿ ಬಡ್ಡಿಯೊಂದಿಗೆ ಮರು ಪಾವತಿಸಲು ಅಭ್ಯರ್ಥಿ ಮತ್ತು ಜಾಮೀನುದಾರರು ಒಟ್ಟಾಗಿಯೂ ಮತ್ತು ಪ್ರತ್ಯೇಕವಾಗಿಯೂ ಭರಿಸಲು ಬದ್ಧರಾಗಿರತಕ್ಕದ್ದು. ಅಂತಹ ಹಣವನ್ನು ಕಂದಾಯ ಬಾಕಿಯಾಗಿ ಇವರೆಲ್ಲರಿಂದ ಒಟ್ಟಾರೆಯಾಗಿ ಅಥವಾ ಪ್ರತಿಯೊಬ್ಬರಿಂದ ಪ್ರತ್ಯೇಕವಾಗಿ ವಸೂಲು ಮಾಡುವ ಹಕ್ಕನ್ನು ಇಲಾಖೆಯು ಹೊಂದಿರುತ್ತದೆ.

**12.5** ಅಭ್ಯರ್ಥಿಗಳ ತರಬೇತಿಯ ಸಂಪೂರ್ಣ ವೆಚ್ಚವನ್ನು ಕರ್ನಾಟಕ ರಾಜ್ಯ ಸರ್ಕಾರವು ಭರಿಸುವುದು. ಆದರೆ ಸಾಧನ ಸಾಮಗ್ರಿಗಳ ಭತ್ಯೆ ₹. 50,000–00 ದ ಶೇ.50 ಅಂದರೆ ₹. 25,000–00 ನ್ನು ಅಭ್ಯರ್ಥಿಗಳು ತರಬೇತಿ ಪೂರ್ಣಗೊಳಿಸಿ ಬಂದ ನಂತರ ಇಲಾಖೆಯಲ್ಲಿ ನಿಯುಕ್ತಿಗೊಂಡ ದಿನಾಂಕದಿಂದ ಪಡೆಯುವ ವೇತನದಿಂದ ಆರಂಭಗೊಂಡು ಒಟ್ಟು 10 ಸಮಾನ ಮಾಸಿಕ ಕಂತುಗಳಲ್ಲಿ ವಸೂಲು ಮಾಡಲಾಗುವುದು. ಮೇಲಿನ ಸಾಧನ ಸಾಮಗ್ರಿ ಭತ್ಯೆಯು ತಾತ್ಕಾಲಿಕವಾಗಿದ್ದು ಪರಿಷ್ಕರಿಸಬಹುದು.

**12.6** ತರಬೇತಿಯನ್ನು ಯಶಸ್ವಿಯಾಗಿ ಪೂರೈಸಿದ ನಂತರ ಇವರುಗಳನ್ನು 6 ತಿಂಗಳ ಅವಧಿಗೆ ವೃತ್ತಿ ತರಬೇತಿಗಾಗಿ ನಿಯೋಜಿಸಲಾಗುವುದು. ಉಳಿದ 1 ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಇವರುಗಳು ವಲಯ ಅರಣ್ಯಾಧಿಕಾರಿಗಳಾಗಿ ಸ್ವತಂತ್ರವಾಗಿ ಕೆಲಸ ನಿರ್ವಹಿಸತಕ್ಕದ್ದು.

**12.7** ತರಬೇತಿಯ ಸಮಯದಲ್ಲಿ ಅಭ್ಯರ್ಥಿಗಳು ವಲಯ ಅರಣ್ಯಾಧಿಕಾರಿ ಹುದ್ದೆಯ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

**13. ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಲ್ಲಿಸಬೇಕಾದ ದಾಖಲೆ/ಪ್ರಮಾಣ ಪತ್ರಗಳ ವಿವರ ಕೆಳಕಂಡಂತಿದೆ:–**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಕಇ 132 ಎಸ್‌ಎಡಿ 97, ದಿನಾಂಕ 8–2–2000 ರನ್ವಯ, ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರ ಹಾಗೂ ಆದಾಯ ಪ್ರಮಾಣ ಪತ್ರ, ಇತ್ಯಾದಿ ಮೀಸಲಾತಿ ಕುರಿತು ಪ್ರಮಾಣ ಪತ್ರಗಳನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

**13.1** ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಡಿ" ರಲ್ಲಿ ಪಡೆದಿರಬೇಕು.

**13.2** ಪ್ರವರ್ಗ– I ಕ್ಕೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಇ" ರಲ್ಲಿ ಪಡೆದಿರಬೇಕು.

**13.3** ಪ್ರವರ್ಗ– IIಎ, IIಬಿ, IIIಎ ಮತ್ತು IIIಬಿ ಗೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಎಫ್" ರಲ್ಲಿ ಪಡೆದಿರಬೇಕು.

**ವಿಶೇಷ ಸೂಚನೆ:**–"ನಮೂನೆ–ಎಫ್" ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಐದು (5) ವರ್ಷಗಳಿಗಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**13.4** ಮಾಜಿ ಸೈನಿಕ ಅಭ್ಯರ್ಥಿಗಳು ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಹೊಂದಿದ ಬಗ್ಗೆ ಮೂಲ ಪ್ರಮಾಣ ಪತ್ರ ಮತ್ತು ಪೆನ್‌ಷನ್ ಪಡೆಯುತ್ತಿರುವ ಬಗ್ಗೆ ದಾಖಲೆ ಪತ್ರ ಪಡೆದಿರಬೇಕು ಹಾಗೂ ಮಾಜಿ ಸೈನಿಕ ಮೀಸಲಾತಿಗೆ ನಿಯಮಾನುಸಾರ ಅರ್ಹರೇ ಎಂಬ ಬಗ್ಗೆ ಪ್ರಮಾಣ ಪತ್ರವನ್ನು ಹತ್ತಿರದ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆಯಿಂದ ಪಡೆದಿರಬೇಕು.

**13.5** (ಅ) ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರಿಗೆ (ಎಲ್ಲಾ ವರ್ಷಗಳು) ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರಿಂದ ನೀಡಲಾದ "ನಮೂನೆ–2"ನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮೇಲುರುಜು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು.

(ಆ) ಗ್ರಾಮೀಣ ಮೀಸಲಾತಿ ಕೋರಿರುವ ಸಾಮಾನ್ಯ ಅರ್ಹತೆಯ (General Merit) ಅಭ್ಯರ್ಥಿಗಳು ಮೇಲೆ 13.5 (ಅ) ರಲ್ಲಿ ತಿಳಿಸಿರುವ "ನಮೂನೆ–2" ರ ಜೊತೆಗೆ ನಿಗದಿತ "ನಮೂನೆ–1" ರಲ್ಲಿ ಸಂಬಂಧಪಟ್ಟ ತಹಶೀಲ್ದಾರರಿಂದ ಅವರು ಮೇಲುಸ್ಥರ (Creamy Layer) ಪರಿಮಿತಿಯಲ್ಲಿ ಬರುವುದಿಲ್ಲವೆಂದು ದೃಢೀಕರಿಸಿರುವ ಪ್ರಮಾಣ ಪತ್ರ ಪಡೆದಿರಬೇಕು.

**ವಿಶೇಷ ಸೂಚನೆ:**– ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ– IIಎ, IIಬಿ, IIIಎ ಮತ್ತು IIIಬಿ, ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

13.6 ಕನ್ನಡ ಮಾಧ್ಯಮ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿದ ಪ್ರಮಾಣ ಪತ್ರ ಪಡೆದಿರಬೇಕು.

13.7 ಹೈದರಾಬಾದ್–ಕರ್ನಾಟಕ ಮೀಸಲಾತಿ ಕೋರುವ ಅಭ್ಯರ್ಥಿಗಳು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮ, 2013ರ ಅನ್ವಯ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸೂಕ್ತ ಪ್ರಾಧಿಕಾರದಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

**14. ಗಮನಿಸಬೇಕಾದ ಮುಖ್ಯ ಅಂಶಗಳು:–**

14.1 ಅಭ್ಯರ್ಥಿಗಳು ಅರ್ಜಿಯನ್ನು On-line ನಲ್ಲಿ ಭರ್ತಿ ಮಾಡುವಾಗ ಅಧಿಸೂಚನೆಯಲ್ಲಿ ತಿಳಿಸಿರುವ ಎಲ್ಲಾ ಅಂಶಗಳನ್ನು ಸರಿಯಾಗಿ ಅರ್ಥೈಸಿಕೊಂಡು, ಅರ್ಜಿಯನ್ನು ಸರಿಯಾಗಿ ಮತ್ತು ಸಮರ್ಪಕವಾಗಿ ಭರ್ತಿ ಮಾಡತಕ್ಕದ್ದು.

14.2 ಅಭ್ಯರ್ಥಿಗಳು ಅರ್ಜಿ ಹಾಕುವ ಮೊದಲು ದೇಹದಾರ್ಢ್ಯತೆಯ ಕುರಿತು ಸದರಿ ಹುದ್ದೆಗೆ ನಿಗಧಿಪಡಿಸಿರುವ ಮಾನದಂಡವು ತಮಗೆ ಇರುವ ಕುರಿತು ಖಚಿತಪಡಿಸಿಕೊಂಡು ಅರ್ಜಿಯನ್ನು ಸಲ್ಲಿಸಲು ತಿಳಿಸಿದೆ.

14.3 On-line ಮುಖಾಂತರ ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ.

14.4 ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ On-line ನಲ್ಲಿ ಸಲ್ಲಿಸಿದ ಅರ್ಜಿಯ ಒಂದು ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

14.5 ಮೂಲ ದಾಖಲೆಗಳ ಪರೀಕ್ಷೆ ನಡೆಯುವ ದಿನಾಂಕ, ವೇಳಾಪಟ್ಟಿ, ಪರೀಕ್ಷಾ ಕೇಂದ್ರ ವಿವರಗಳುಳ್ಳ ಪ್ರವೇಶ ಪತ್ರವನ್ನು ಅರ್ಹ ಅಭ್ಯರ್ಥಿಗಳು ಇಲಾಖಾ ವೆಬ್‌ಸೈಟ್ www.aranya.gov.in ನಿಂದ ಡೌನ್‌ಲೋಡ್ ಮಾಡಿಕೊಳ್ಳುವುದು. ನೇಮಕಾತಿ ಪ್ರಕ್ರಿಯೆಯ ಎಲ್ಲಾ ಮಾಹಿತಿಗಳು ಕಾಲ–ಕಾಲಕ್ಕೆ ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಇದನ್ನು ಅಭ್ಯರ್ಥಿಗಳು ಖುದ್ದು ಎಚ್ಚರಿಗೆ ವಹಿಸಿ ವೆಬ್‌ಸೈಟ್‌ನಲ್ಲಿ ವಿವರ ಪಡೆಯತಕ್ಕದ್ದು.

14.6 ಯಾವುದೇ ಹಂತದಲ್ಲಿ ಅಭ್ಯರ್ಥಿಯು ತಾನು ಹೊಂದಿರುವ ಪ್ರವರ್ಗದ ಕುರಿತು ಮಾಹಿತಿಯನ್ನು ಹೊಸದಾಗಿ ಸೇರ್ಪಡೆ ಮಾಡಲು ಅಥವಾ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ.

14.7 ಪ್ರಸ್ತುತ ಸರ್ಕಾರಿ (ಕೇಂದ್ರ ಸರ್ಕಾರ/ಕರ್ನಾಟಕ ರಾಜ್ಯ ಸರ್ಕಾರ/ಇತರೆ ರಾಜ್ಯಗಳು) ಹಾಗೂ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಕಡ್ಡಾಯವಾಗಿ ಅನುಮತಿ ಪತ್ರವನ್ನು ಪಡೆದಿಟ್ಟುಕೊಂಡು ಅರಣ್ಯ ಇಲಾಖೆಯು ಅಪೇಕ್ಷಿಸಿದಾಗ ನೀಡತಕ್ಕದ್ದು.

14.8 ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಲಾಗುವುದು.

14.9 ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

14.10 ಕಾನೂನು ಬಾಹಿರವೆಂದು ಘೋಷಿಸಲಾದ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

14.11 ಅಭ್ಯರ್ಥಿಯು ಸಮಾಜಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ ಅಂತಹ ವ್ಯಕ್ತಿಗಳು ನೇಮಕಾತಿಗೆ/ತರಬೇತಿಗೆ ಅರ್ಹರಾಗುವುದಿಲ್ಲ.

14.12 ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿಯರನ್ನು / ಪತಿಯರನ್ನು ಹೊಂದಿದ ಪುರುಷ / ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೇ ನೇಮಕಾತಿಗೆ/ತರಬೇತಿಗೆ ಅರ್ಹರಾಗಿರುವುದಿಲ್ಲ.

14.13 ಯಾವುದೇ ಅಭ್ಯರ್ಥಿಯು ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರ / ಸರ್ಕಾರಿ ಸಂಸ್ಥೆಗಳಿಗೆ ನಡೆಸುವ ಯಾವುದೇ ಪರೀಕ್ಷೆಗಳಿಗೆ ಅಥವಾ ಆಯ್ಕೆಗಳಿಗೆ ಹಾಜರಾಗಲು ತಾತ್ಕಾಲಿಕವಾಗಿ ಬಹಿಷ್ಕರಿಸಲ್ಪಟ್ಟಿದ್ದರೆ ಅಥವಾ ಖಾಯಂ ಆಗಿ ಅನರ್ಹಗೊಂಡಿದ್ದರೆ ಅಥವಾ ಬಹಿಷ್ಕರಿಸಲ್ಪಟ್ಟಿದ್ದರೆ, ಅಂತಹ ಅಭ್ಯರ್ಥಿಯು ನೇಮಕಾತಿಗೆ/ತರಬೇತಿಗೆ ಅರ್ಹರಾಗಿರುವುದಿಲ್ಲ.

14.14 ಅಭ್ಯರ್ಥಿಯು ನೇಮಕಾತಿ ಪರೀಕ್ಷೆಗೆ ಬೇರೊಬ್ಬ ವ್ಯಕ್ತಿಯನ್ನು ತನ್ನ ಪರವಾಗಿ ಕಳುಹಿಸಿದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಈ ನೇಮಕಾತಿಗೆ ಅವರನ್ನು ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

14.15 ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–ಎಸ್‌ಪಿಎಲ್–04–ಪಿಇಟಿ–2005, ದಿನಾಂಕ 31–3–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory Pension Scheme) ಗೆ ಈ ನೇಮಕಾತಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.

14.16 ಅಧಿಸೂಚನೆಯಲ್ಲಿ ತಿಳಿಸಿರುವ ಅಂಶಗಳ ಕುರಿತು ಹಾಗೂ ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟು ತೀರ್ಪುಗಳು, ಸರಕಾರದ ಆದೇಶಗಳು, ನಿರ್ದೇಶನಗಳು, ಸುತ್ತೋಲೆಗಳು ಬಂದಲ್ಲಿ ಅಧಿಸೂಚನೆಯನ್ನು ಮಾರ್ಪಾಡು ಮಾಡುವ ಹಾಗೂ ಪ್ರಕಟಿಸಿರುವ ಆಯ್ಕೆ ಪಟ್ಟಿಯಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಹೊಂದಿರುತ್ತದೆ. ವಿಧಿಸಲಾಗಿರುವ ಯಾವುದೇ ಷರತ್ತನ್ನು ಸಡಿಲಗೊಳಿಸುವ ಅಥವಾ ಹೆಚ್ಚುವರಿ ಷರತ್ತನ್ನು ವಿಧಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಹೊಂದಿರುತ್ತದೆ.

14.17 ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಮತ್ತು ಮೀಸಲಾತಿ ವರ್ಗೀಕರಣದಲ್ಲಿ ಏನಾದರೂ ಬದಲಾವಣೆ ಮಾಡಬೇಕಾದ ಅವಶ್ಯಕತೆ ಕಂಡು ಬಂದಲ್ಲಿ ಯಾವುದೇ ಸಂದರ್ಭದಲ್ಲಿ ಬದಲಾವಣೆ ಮಾಡಲಾಗುವುದು ಮತ್ತು ಬದಲಾದ ವಿವರಗಳನ್ನು ಇಲಾಖಾ ವೆಬ್‌ಸೈಟ್: www.aranya.gov.in ನಲ್ಲಿ ಪ್ರಕಟಿಸಲಾಗುವುದು.

